# ಶುದ್ಧಾಶುದ್ಧ ಪತ್ರಿಕೆ.



| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೫ | ೪ | ತತ್ತ್ವಮಾಂಗವ | ಉತ್ತ್ವಮಾಂಗವ |
| ೨೮ | ೧೮ | ತಹಿಪೆಸು | ತಪಿಪೆಸು |
| ೪೭ | ೧೫ | ತೆರಡ | ತೆರೆದ |
| ೫೫ | ೩ | ಫಲವದೇವುದೊ | ಫಲವದಾವುದೊ |
| ೫೯ | ೧೩ | ಮುಯುಸು | ಮುಮುಸ |
| ೬೪ | ೧೮ | ತೆಲೆ | ತಲೆ |
| ೭೯ | ೧ | ಯೆದೆಯು | ಎದೆಯು |
| ೯೭ | ೧ | ಪಾಲಿ | ವಾಲಿ |
| ೯೮ | ೪ | ವೊರೆದ | ಪೊರೆದ |

೫೩, ೫೫, ೫೭, ೫೯ ಪುಟಗಳ ಶಿರೋಲೇಖನವನ್ನು **‘ಚತುರ್ಥತರಂಗ’** ಎಂದು ಓದಿಕೊಳ್ಳಬೇಕು.



# ವಾಲಿ

ಗ್ರಂಥಕರ್ತರು

ಪಂಡಿತ ಕೆ. ಶ್ರೀಕಂಠಶಾಸ್ತ್ರಿಗಳು

ಕನ್ನಡ ಪಂಡಿತರು

ಮಹಾರಾಜರವರ ಹೈಸ್ಕೂಲ್

ಮೈಸೂರು



ವರ್ಧಮಾನ ಪವರ್ ಪ್ರೆಸ್, ಮೈಸೂರು.

1930

ಬೆಲೆ ೦—೮—೦

# ವಿಷಯಾನುಕ್ರಮ


| | | | |
|---|---|---|---|
| ೧ | ಪ್ರಥಮತರಂಗ | ಜನನ ಮತ್ತು ಪಟ್ಟಾಭಿಷೇಕ | ೧ — ೨೦ |
| ೨ | ದ್ವಿತೀಯತರಂಗ | ವಿವಾಹ | ೨೦ — ೩೮ |
| ೩ | ತೃತೀಯತರಂಗ | ವಿಜಯ ಮತ್ತು ಸ್ನೇಹ | ೩೮ — ೫೦ |
| ೪ | ಚತುರ್ಥತರಂಗ | ಶಾಪ ಮತ್ತು ಅಂತಃಕಲಹ | ೫೧ — ೭೧ |
| ೫ | ಪಂಚಮತರಂಗ | ವಧೆ ಮತ್ತು ಪಟ್ಟಾಭಿಷೇಕ | ೭೧ — ೯೮ |

# ಮುನ್ನುಡಿ

ರಾಮಾಯಣಮಹಾಸಾಗರದಲ್ಲಿ ರಾಮರಾವಣರ ಕಥಾಕಲ್ಲೋಲಗಳ ಇರುಚಿನಲ್ಲಿ ವಾಲಿಯ ಸಚ್ಚರಿತ್ರೆಯು ಅಲ್ಲಿ ಇಲ್ಲಿ ಛಿದ್ರವಾಗಿ ಹೊಳೆದೂ ಹೊಳೆಯದೆ ಬೆಳ್ಮೊರೆಯಂತೆ ತೆರೆಮರೆಯಲ್ಲಿ ಅಡಗಿರುವುದು. ಕುಲೀನತೆ, ಧಾರ್ಮಿಕವೃತ್ತಿ, ಅಸಾಧಾರಣಶೌರ್ಯ, ವಿನೀತಭಾವ, ಸರಲತೆ ಮುಂತಾದ ಸುಗುಣಗಳು ವಾಲಿಯಲ್ಲಿ ಮೂರ್ತೀಭವಿಸಿದ್ದುವು.

ಬ್ರಹ್ಮನ ಆನಂದಬಾಷ್ಪದಿಂದ ಜನಿಸಿದ ಋಕ್ಷರಜಸೂ ದೇವೇಂದ್ರನೂ ಈತನ ತಾಯಿತಂದೆಗಳು. ಚತುಸ್ಸಮುದ್ರದಲ್ಲೂ ಸಂಧ್ಯಾದಿ ನಿಯಮಗಳನ್ನು ಆಚರಿಸುತ್ತಿದ್ದ ಕರ್ಮಾತನಿವನು. ಗೋಲಭ, ದುಂದುಭಿ, ಮಾಯಾವಿ ಎಂಬ ವೀರಾಗ್ರೇಸರರನ್ನು ಸಂಹರಿಸಿದುದಲ್ಲದೆ, ರಾಮಾಯಣದ ಮುಖ್ಯಪಾತ್ರಗಳಾದ ರಾಮರಾವಣರಿಗೂ ಮಣ್ಣು ಮುಕ್ಕಿಸಿದ ವೀರನಿವನು. ನರರ, ಮುನಿಗಳ ಮತ್ತು ಕ್ಷತ್ರಿಯರ ದಾರಿಯಲ್ಲಿ ಅಡ್ಡಬಂದವನಲ್ಲ. ಈತನ ಸಾವೂ ಒಂದು ವಿಲಕ್ಷಣ; ಅಕಸ್ಮಾತ್ತಾಗಿ ಬರಸಿಡಿಲೆರಗಿದಂತೆ, ಈತನ ವಧೆಯು ಸಮಸ್ಯೆಯು ಇಂದಿಗೂ ಬಿಚ್ಚಲಾಗದ ಒಗಟೆಯಾಗಿದೆ.

ದುಃಖಾಂತವಾಗಿ ನಿಲ್ಲುವ ಈತನ ಸುಂದರಚರಿತ್ರೆಯನ್ನು ಚಿತ್ರಿಸಬೇಕೆಂಬುದೇ ಈ ಗ್ರಂಥಕರ್ತೃವಿನ ಆಶಯವು. ಕಥೆಯೇನೋ ಹಳೆಯದೇ. ಆದರೂ ಕಥಾವಸ್ತು ಸನ್ನಿವೇಶ ಇವುಗಳ ವಿನ್ಯಾಸಕ್ರಮದಲ್ಲಿ ನೂತನಮಾರ್ಗವನ್ನು ಅನುಸರಿಸಿದೆ. ಆವಶ್ಯಕವೆಂದು ತೋರಿದ ಕಡೆ ಕೆಲವು ಏರುಪೇರುಗಳನ್ನೂ ಮಾಡಿದೆ. ಶ್ರೀರಾಮನನ್ನು ದೈವಿಕವ್ಯಕ್ತಿಯಾಗಿ ಭಾವಿಸದೆ ರಾಜಪುತ್ರನನ್ನಾಗಿ ಪರಿಗಣಿಸಿದೆ. ಜಾಂಬವರು

ವಾಲಿಯ ಪೋಷಕರಾಗಿ ಪರಿಗಣಿಸಲ್ಪಟ್ಟಿದ್ದಾರೆ. ಸುಷೇಣಪತ್ನಿಗೆ 'ನಾಕೆ' ಎಂಬ ನಾಮಕರಣವನ್ನು ಮಾಡಿದೆ. ಹೀಗೆಯೇ ಕೆಲವು ಸಂದರ್ಭಗಳಲ್ಲಿ ಅಲ್ಪ-ಸ್ವಲ್ಪ ಮಾರ್ಪಾಟಿನಿಂದ ವಸ್ತುವು ಮುಂದುವರಿದಿದೆ.

ಇದರ ರಚನೆಗಾಗಿ ಅನುದಿನವೂ ನನ್ನನ್ನು ಪ್ರೇರಿಸಿದ ಮ|| ಎ. ಶೇಷಯ್ಯಂಗಾರ್ಯರು, ಎಂ.ಎ., ಮ|| ಸಿ. ಎಸ್. ಶ್ರೀನಿವಾಸ ರಾಯರು, ಬಿ.ಎ., ಬಿ.ಟಿ., ಮುಂತಾದ ಸ್ನೇಹಿತರಿಗೂ, ಈ ಗ್ರಂಥವನ್ನು ನೋಡಿ ಲೋಪದೋಷಗಳನ್ನು ಸೂಚಿಸಿದ ಪಂಡಿತರು ತೀ|| ಮೃತ್ಯುಂಜಯಶಾಸ್ತ್ರಿಗಳಿಗೂ, ಸಕಾಲದಲ್ಲಿ ಮುದ್ರಣಾದಿಗಳನ್ನು ಮಾಡಿಕೊಟ್ಟ ಆಸ್ಥಾನವಿದ್ವಾನ್, ನ್ಯಾಯತೀರ್ಥ ಎ. ಶಾಂತಿರಾಜಶಾಸ್ತ್ರಿಗಳಿಗೂ ಬಹು ಕೃತಜ್ಞನಾಗಿರುತ್ತೇನೆ.

ಕನ್ನಡ ಭಾಷಾಭಿಮಾನಿಗಳು ಈ ಅಲ್ಪವಾದ ಪ್ರಥಮಸೇವೆಯನ್ನು ಪ್ರೀತಿಯಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

ಇತಿ

ಸಜ್ಜನವಿಧೇಯ,

ಪಂಡಿತ ಕೆ. ಶ್ರೀಕಂಠಶಾಸ್ತ್ರಿ.

# ವಾಲಿ



## ಪ್ರಥಮತರಂಗ

## ಜನನ ಮತ್ತು ಪಟ್ಟಾಭಿಷೇಕ

ಅರಿವಿಗರಿದೆನಿಸುತ್ತೆ, ಸರ್ವವ
ಧರಿಸಿ ಸಚ್ಚಿದ್ರೂಪವೆನಿಸುತೆ,
ಪರಕೆ ಪರವೆನಿಸುತ್ತೆ, ತಾನೇ ಬೆಳಗುತಿರುತಿರುವ,
ಇರಕೆ ಚೇತನರೂಪವೆನಿಸಿರೆ,
ನಿರುತ ನಂಬಿದ ಸಾಧಕಗೆ ತ
ನ್ನಿರವನೇ ನೆಲೆಗೆಯ್ವ, ಬೊಮ್ಮವದೊಂದು ಮಿಗಿಲೆಸೆಗೆ.

೨

ಅಂಜಿಸುತ ಮೂಲೋಕವನು ಬಹ
ನಂಜನೀಂಟುತೆ, ಭಕ್ತಹೃದಯದ
ಮಂಜ ಹರಿಸುತೆ, ಭವದ ರೋಗಕೆ ವೈದ್ಯನೆನಿಸಿರ್ಪ,
ಕೆಂಜೆಡೆಯು, ಕಿರುವೆರೆಯು, ಗಂಗೆಯು,
ಮಂಜುಳಾಂಗದ ಶಿವಗೆ, ಪುಷ್ಪಗ
ಳಂಜಳಿಯನೀಕೃತಿಯನರ್ಪಿಸಿ, ಧನ್ಯನಾಗುವೆನು.

೩

ಎಲ್ಲಲೋಕಗಳಿಂದ ಮೇಲಿಹು-
ದೆಲ್ಲತತ್ತ್ವಜ್ಞಾನಿಗಳ ಮನೆ,
ಯೆಲ್ಲಲೋಕದಿನಿದುವೆ ಸತ್ತ್ವವು, ಪೆಸರುಮದೆ ನೋಡೆ ;
ಎಲ್ಲವೇದದ ಋಷಿಯುದಾಗಿಹು
ದೆಲ್ಲಮುಕ್ತರ ನಿಲಯಮಿದು, ಮೇ
ಣೆಲ್ಲಮಿದಕಿನ್ನೊಂದು ಸಮಮಹ ತಾಣ ವಿಶ್ವದೊಳು

೪

ಮೂರುಮೂರುತಿಗಳಿಗೆ ಮೊದಲಿಗ
ನಾರ ಕೃತಿಗುಂ ತನ್ನದೇ ಮೊದ
ಲಾರಯಲು ಶಾಂತಾತ್ಮನಜನುಂ ಸರ್ವತೋಮುಖನು ;
ಪಾರಮೇಷ್ಠ್ಯದ ಪದವಿ ತನ್ನದ
ಪಾರವೇಗವೆ ಮೊಗವು ರಾಜಸ
ಸಾರಮೇ ತಾನಾಗಿ ರಂಜಿಸುತಿರ್ಪನಾ ಬೊಮ್ಮ.

೫

ವೇದದೋದಿಗೆ ಬಿಡುವದಿಲ್ಲಂ
ವಾದಿಗಳು ಸೆಳೆಯುವರು ತೀರ್ಪಿಗೆ.
ಪೋದಬಂದವರಾದರಿಪ ಬೆಸಕಿಲ್ಲವೈ ತೆರವು ;
ಆದೊಡಂ ತೊಡಕಾದ ವಿಶ್ವದ
ಭೇದಕೋಟಿಯು ಸೃಷ್ಟಿಕಾರ್ಯಕೆ
ಬಾಧೆಯಿನಿಸುಂ ತಟ್ಟದೀತನದೇನು ಸಾಹಸಿಯೋ !

೬

ಶ್ರುತಿಗೆ ಸೊದೆಯನು ಕರೆವ ವೀಣೆಯು
ಶ್ರುತಿಗೆ ಜತಿಗುಡುತ್ತೇಳ್ವ ವಾಣಿಯು
ವಿತತಗಾನದ ಸೊಬಗನಾಲಿಸಿ, ಮರೆದು ತನುಮನವ,
ಇತರವಸ್ತುವ ತೊರೆದು, ಗಾನಾ
ಮೃತದ ರಸದಿಂ ತಣಿದು, ಶಾಂತರು
ಸತತ ಮೋಕ್ಷದ ಸೊಗವ ಗಳಿಸಿಹರಲ್ಲಿ ಮುನಿವರರು.

೭

ಕಣ್ಣನರೆಮುಚ್ಚುತಲಿ, ಹೃದಯದ
ತಣ್ಣನೆಯ ಮಂದಿರದೆ ಕಬಗೆ
ಬಣ್ಣನೆಯ ನುಡಿಗಳಿಗೆ ಮೀರಿದ ಪರಮವಸ್ತುವನು
ಸಣ್ಣಿ, ಸಂತಸ ಮೀರಿ ಮೆಯ್ಯೊಳ್
ಬಣ್ಣಗೂಡುತೆ ಪುಲಕಮುಮರಿರೆ,
ಸಣ್ಣನಗೆಯಂ ತೂರಿ ಬೊಮ್ಮನದೊಂದು ದಿನವಿರ್ದರ್.

೮

ಎಂತುಟಾದುದೊ ಬೊಮ್ಮದನುಭವ
ಮಂತುಟಾದುದು ಸಾತ್ತ್ವಿಕಸ್ಪೃಘೆ ;
ಯೆಂತುಟೇರಿತೊ ಕಾಂತಿಯಂತುಟೆ ಸಂತಸದ ಸೊದೆಯು
ಅಂತರಂಗವ ತುಂಬಿ, ನಯನ
ಪ್ರಾಂತದಿಂ ಪೊರಮಟ್ಟು ಗೋಚರ
ಮಾಂತುದೆಸಲಾನಂದಬಾಷ್ಪವು ಕೋಡಿನರಿದತ್ತು.

೯

ಇರದು ಕಾರ್ಯಕ್ಕೊದಗದರ್ಥವು ;
ಕರೆಯುವಿಲ್ಲವು ಕಾರ್ಯಜಾತದೆ
ಸರಸಿಜೋದ್ಭವಸೃಷ್ಟಿಮಹಿಮೆಯು ಸಾರವುಂ ತಿಳಿಯೆ.
ನಿರುಪಮಾನಂದಾಶ್ರುಬಿಂದುವು
ಧರೆಗೆ ಜಗುಳದ ಮುನ್ನ, ತನ್ನಯ
ಕರದೆ ಪಿಡಿಯುತ್ತದನು ಸಾರ್ಥತೆಗೆಯ್ಯಲಸುವಾದ.

೧೦

ಮೊದಲ ಸೃಷ್ಟಿಯು ಗೆಯ್ಮೆ ಮೂರುಂ
ವಿಧದ ಗುಣಗಳ ಬೆರಕೆ ಸೇರ್ದುದು
ವಿದಿತಮಾಬಿಂದುವಿನ ಸೃಷ್ಟಿಗೆ ಸಾತ್ತ್ವಿಕವೆ ಸೆರವು.
ಇದು ನಿರರ್ಥಕವಾಗದಂತಿರ
ಲಿದರಿನಾಂ ಸೃಷ್ಟಿಪೆನು ಲೋಕ
ಕ್ಕದುಬುತದ ವಸ್ತುವನು ಸತತಾನಂದಬೀವಿಯನು.

೧೧

ಎಂದು ಚಿಂತಿಸಿ, ತನ್ನ ಕರದಾ
ಬಿಂದುವುಂ ಧರೆಗುರುಳೆ ಕಿಡಿಪಿದ
ನಂದು, ಚಂಚಲವಾಗಿ ಬಿಳ್ದುದು ಬಿಂದುವಿಳೆಯೊಳಗೆ.
ಅಂದವಾಗಿಹ ರೂಪದಿಂ, ಮೇ
ಳೊಂದುಗೂಡಿದ ಚಪಲಚಿತ್ತದಿ
ನೊಂದು ವಾನರಭಲ್ಲಸುದಿಸಿತು ರಾಜತೇಜದಲಿ.

೧೨

ಹೆತ್ತ ಹೆಗ್ಗಣ ಮುದ್ದು ಪೆತ್ತಗೆ,
ಚಿತ್ತಕೇಂ ಕಣ್ಣುಂಟೆ ? ಭಲ್ಲನ
ಮುತ್ತಿಡುತಲಾಘ್ರಾಣಿಸುತ್ತಲಿ ಶಿರವ ಬೋಳೈಸಿ,
ತತ್ತಮಾಂಗವ ತೂಗಿ, ತನ್ನಯ
ಕೃತ್ಯಮಂ ಮರೆದೊಂದು ಚಣ, ಕೃತ
ಕೃತ್ಯ ತಾನೆಂದಜನು ಬಗೆದನು. ಮಮತೆಯೇಂ ಪಿರಿದೋ !

೧೩

ಮಗುವೆ, ಭಲ್ಲೂಕೇಂದ್ರ, ಸತ್ತ್ವದಿ
ನೊಗೆದ ಜಲದಿಂ ಪಡೆದೆ ಜನ್ಮವ ;
ಬಗೆಯದೊಂದನು ನನ್ನ ಸನ್ನಿಧಿಯಲ್ಲಿ ನೀಂ ನೆಲಸು.
ಜಗದ ಕೋಟಲೆಗಳಿಗೆ ಸಿಲ್ಕದ
ಬಗೆಯ ಬಲವೊದಗಲ್ಕೆ ಸಂತರ
ನಗಲಬಾರದು ; ನೆಲಸು ನೀನಿಲ್ಲೆಂದು ನೇಮಿಸಿದ.

೧೪

ಸಿದ್ಧರೆನಿಬರೊ ತಿಣುಕಿ ಬಹುದಿನ
ಶುದ್ಧಭಾವವ ಪಡೆಯರಂತಿರೆ
ಬುದ್ಧಿಯೊಳ್ ಚಂಚಲತೆ ಬೆರೆದಿಹ ಕಪಿಗೆ ತರವಹುದೆ ?
ಗದ್ದುಗೆಯನೇರಿಸಿದ ಶುನಕವು
ಬಿದ್ದು ದಿಕ್ಕೆಟ್ಟೋಡುವಂತಿರೆ
ಕದ್ದು ಹಾಯ್ದುದು ಕಪಿಯು. ಕಟ್ಟಿದ ಬುತ್ತಿ ಪಳಸಿದುದು.

೧೫

ಉಗಿದು ಕಿತ್ತೆಸೆಯುತ್ತೆ ಲತೆಗಳ,
ನೆಗೆದು ಕೊಂಬೆಯನಡರಿ ಗಿಡುಗಳ,
ಚಿಗಿದು ನರ್ತಿಸಿ ಕೂಗಿ ಪಲ್ಗಿರಿದಾರ್ದು ಬೊಬ್ಬಿರಿದು,
ಒಗೆಯು ಬೇಸರವುಳಿವ ಬಗೆಯಿಂ
ಸುಗಿಯುದೆಲ್ಲಿಯು ನಿಲ್ಲದಳುಕದೆ
ಲಗುಬಗೆಯ ಕಪಿ ನಡೆದು ಮೇರುವಿನೆಡೆಗೆ ಧಾಪಿಸಿತು.

೧೬

ಕಂಡ ಗಿಡುಮರವೆಲ್ಲವನು ತಾ
ಸಂಡಲೆದು, ಫಲಪುಷ್ಪಗಂಧವ
ನುಂಡು ಧರಿಸುತೆ, ಲತೆಯ ತಾಗುತೆ, ಮುಂದಗಮನದಲಿ
ಬಂಡನರಸುತ ಮುಂಬರಿದು ಬಹ
ಬಂಡುಣಿಗೆ ಮುದವೇರಿಸುತ್ತಲಿ,
ಚಂಡವಾಯುವಿನಂತೆ ಮುಂದಕೆ ಸರಿದುದಾಕಪಿಯು.

೧೭

ಪಾಲಕನ ಕಟ್ಟಳೆಯೆ ಬನದೊಳ್
ಲೀಲೆಯಿಂದೈತರುತೆ ಮುಂದಕೆ,
ಕಾಲಕರ್ಮದ ಯೋಗದಿಂ ತಿಳಿಗೊಳನ ನೋಡಿದುದು.
ನೀಲಮಣಿಯಂತಿರ್ಪ ಜಲ ಬಿಸ
ಜಾಲದಿಂ ರಂಜಿಸುತೆ, ವಾನರ
ಬಾಲಕನ ಕುಣಿತಕ್ಕೆ ತಾಳವ ಹಾಕುವಂತಿರಲು.

೧೮

ಬಣ್ಣಬಣ್ಣದ ಬಿರಿದ ಪೂಗಳು
ಕಣ್ಗೆ ಹಬ್ಬವ ಮಾಡೆ, ತರುಲತೆ
ಬಣ್ಣವೇರಿಸುವಂತೆ ಬಾಗಿರೆ ನೀರ ಪಕ್ಕಿಗಳು
ಸಣ್ಣದನಿಯಿಂ ಪಾಡೆ, ಮಾರುತ
ತಣ್ಣತಣ್ಣನೆ ಬೀಸುತಿದಿರೊಳು
ಚಿಣ್ಣನನು ಬೋಳೈಸಿ ಕುತುಕದ ಭುಜವ ತಟ್ಟಿದುದು.

೧೯

ಏಾರೆ ಚಪಲತೆ ತಡಿಯ ವೃಕ್ಷವ
ನೇರಿ ಕಪಿ, ಪೂಗಾಯಿಪಣ್ಗಳ
ತೂರಿ ನೀರೊಳು, ಕೊಂಬೆಗಳ ಮುರಿದೆಸೆದು ದೆಸೆದೆಸೆಗೆ
ಚೀರೆ, ಸರಸಿಯ ಪಕ್ಷಿಜಾಲವು
ಪಾರಿ ಪೋದುದು ಸಭಕೆ. ಮರ್ಕಟ
ಕೇರತುತ್ಸಹ. ಕೆಳಗೆ ಪ್ರತಿಬಿಂಬವನು ನೋಡಿದುದು.

೨೦

ಇದೆಕೊ ತನ್ನಯ ಬಂಧು ನೀರೊಳ್ ;
ಮುದದಿಸಿರ್ಪೆನು ; ಜೊತೆಯು ದೊರೆದುದು.
ಹೃದಯ ಮೆಚ್ಚುವ ತೆರದೆ ಬಿನದಂಬಡುವೆನೆನ್ನುತಲಿ,
ಉದಕದಾ ಪಡಿನೆಳಲ ತನ್ನಯ
ಬದಿಗೆ ಕರೆಯಲ್ತೊಡಗಿ ಕಪಿ, ಏಧ
ಏಧದ ಚೇಷ್ಟೆಯ ಗೆಯ್ಯುತೊಡಗಿತು. ಪುರ್ಚುರ್ಪೆರ್ಚಿದುದು.

೨೧

ನೋಡೆ ನೋಡಿತು ; ಕುಣಿಯೆ ಕುಣಿಯಿತು ;
ಪಾಡೆ ಪಾಡಿತು ; ಕೂಗೆ ಕೂಗಿತು ;
ಕೋಡಿ ಪಿಂಗಲು ಕೋಡಿ ಪಿಂಗಿತು , ಪಲ್ಗಿರಿಯೆ ಪಲ್ಲ
ಕೂಡೆ ತೋರಿತ್ತೇಡಿಸಲು ತಾ
ನೇಡಿಸಿತ್ತದು. ವಾನರನು ರೋ
ಷಾಡಿ ಮಿಗಿಲಾಯುಸವ ಪಡೆದುದು. ಕೋಪ ಮಿಾರಿದುದು.

೨೨

ಬುದ್ಧಿಗಲಿಸುವೆಸಿದಕೆ, ತಪ್ಪಲ
ಸುದ್ದಿಯಿಲ್ಲದ ತೆರದಿ ನೆಗ್ಗಿತೆ,
ಕದ್ದು ಸರಿಯಲ್ಬಿಡೆನು ; ಪೊಯ್ವೆನು ; ಸಲುಗೆಗುಡೆಸಿದಕೆ.
ಅದ್ದಿನೀರೊಳ್ತೆಗೆವೆ, ತನ್ನನು
ದೊದ್ದೆಗನ ಪರಿಯಿಂದ ಕಾಣು
ತ್ತುದ್ದುರುಟುತನದೋರಿದುದಕಿಂ ದಂಡನೆಯ ಗೆಯ್ವೆ.

೨೩

ಎಂದು ಶಾಖಾಮೃಗವು ಸರಸಿಯ
ಲಂದು ಧುಮುಕಿತು ; ಮುಳುಗಿತೆದ್ದಿತು ;
ನಿಂದು ನೋಡಿತು ಮುಳುಗಿ ತಡಕಿತು ಮತ್ತಮರಸಿದುದು.
ಹಿಂದು ಮುಂದಕೆ ನೆಗೆದು ಮುಳುಗು
ತ್ತೆಂದಿನಂತಿರೆ ಬರಿಯ ಬೆಮೆಯಿಂ
ನೊಂದು. ಮಿಗಿಲಾಯುಸದಿ ತಡಿಯನು ಸೇರ್ದುದಾಕಪಿಯು.

೨೪

ಕಾಂತಿಗೂಡಿತು ಮೊಗವು; ಕೃಶತೆಯು
ನಾಂತು ಮೆರೆದುದು ನಡುವು; ಘನಕುಚ
ವಾಂತು ಶೋಭಿಸಿತೆದೆಯು; ಪೆಣ್ಮಣಿರೂಹು ಬಂದಿತ್ತು.
ನೋಂತೆನಿಲ್ಲಾನಿದಕೆ; ಮನದೆ ನಿ
ತಾಂತದುಃಖವು ಮೂಡುತಿದೆ; ಪಿತ
ನಂತರಂಗಕೆ ತಪ್ಪಿ ನಡೆದೆನದೇನ ಮಾಡುವೆನು?

೨೫

ರೂಪಪಲ್ಲಟವಾಯ್ತು; ಪೆಣ್ಣಿನ
ರೂಪ ಬಂದುದು. ಸತಿಯ ಜನ್ಮವು
ಪಾಪಫಲವೇಂ? ಲೋಕಕಾರ್ಯಕ್ಕೀರ್ವರುಂ ಬೇಡಾ?
ಲೋಪಮಿಲ್ಲಿನಿತಿಲ್ಲ; ಚತುರಗೆ
ತಾಪ ಸೇರದು; ಮನವ ದೈನ್ಯದ
ಕೂಪದೊಳಗೆಸೆಯಲ್ಕೆ ಬಾರದು. ಮನವೆ ಮೂಲೋಕ.

೨೬

ಎದ್ದಿತೆನ್ನುತ್ತೆ, ಬನದಿ ಚರಿಸುತ್ತೆ
ಮೆದ್ದು ತನಿವಣ್ಣುಗಳ, ಮಾರ್ಗದ
ಲಿದ್ದ ಶಿಲೆಯುಂ ಸೇರಿ, ನೆಳಲಲಿ ವಿಶ್ರಮಂಗೊಂಡು,
ನಿದ್ದೆವೋಗಲ್ಕೆಂದು ಚಿಗುರಿನ
ಗದ್ದುಗೆಯ ರಚಿಸುತ್ತೆ ಕುಳ್ಳಿರೆ,
ನಿದ್ದೆವೋಗದ ಜನರ ದೇವನು ಬಂದನಿದಿರಾಗಿ.

೨೭

ನಿಂದು ಸಂಕ್ರಂದನನು ಸತಿಯುಳ
ಮುಂದೆ, ಬೆಡಗಿಂ ಮಧುರವಚನಗ
ಳಿಂದಲಾಕೆಯ ಮನವ ತನುವಂ ಸೆಳೆದನಾಕ್ಷಣದೆ
ಇಂದಿರನ ದಯೆಯಿಂದ ಪುಟ್ಟಿದು
ದೊಂದು ವಾನರಶಿಶುವು. ತಾಯಿಗೆ
ತಂದೆಗಂ ಕಣ್ಬೆಳಗು ತಾನಾಗುತ್ತೆ ರಂಜಿಸಿತು.

೨೮

ವಾಲಧಿಯೊಳಿವ ಪುಟ್ಟಿ ಪೆಸರಿಂ
ವಾಲಿಯೆನಿಸುವ, ಗಹನರಾಜ್ಯವ
ಪಾಲಿಸುವನೆನ್ನಿಂದ ಪುಟ್ಟಿಹನದರಿನೀತನನು
ಪೋಲಿಸುವ ನರ ಪುಟ್ಟನೋರ್ವನು.
ಬಾಲೆ ಎನ್ನೀ ಕೊರಳ ಕಾಂಚನ
ಮಾಲೆಯನು ಧರಿಸಿರಲಿ ; ಮೇಲಿಂ ಮೇಲೆ ಮೇಲಹುದು.

೨೯

ಎನುತೆ ದಿವಿಜೇಶ್ವರನು ಕಂಠದ
ಕನಕಮಾಲೆಯನಿಕ್ಕಿ ಕುವರಗೆ,
ವನಜಮುಖಿಯನುಮತಿಯ ಪಡೆಯುತೆ ಪೊರಟನಲ್ಲಿಂದ.
ಕನಕಭೂಷಣದಿಂದ ಶೋಭಿಪ
ಪಿಸುತವಾಲಿಯ ಮುದ್ದಿಸುತ್ತಲಿ,
ತನತು ಮುಂದಿನ ಕಾರ್ಯಭಾರವ ಮರೆದಳಾರಮಣಿ.

೩೦

ಸೂರಿಯನು ದಿನಚರ್ಯೆಗೆಯ್ದು
ತ್ತೇರಿ ನಭವನು, ಪಡುವಲದ್ರಿಯ
ಸೇರಲೆಯ್ತರುತಿರ್ದು ಕಂಡನು ವಾನರಿಯನಲ್ಲಿ.
ನಾರಿಯಳ ರೂಪಿಂಗೆ ಸೋತನು.
ತಾರಿ ಮುಂಗಾಣದೆಯೆ, ದಿವಸದ
ಕಾರಿಯವ ಕಡೆಗಣಿಸಿ, ನಿಂದನು ಸುದತಿಯಿದಿರಿನೊಳು.

೩೧

ಜಗದ ಕಣ್ಣೆನಿಸಿರ್ಪ ಸೂರ್ಯನ
ಬಗೆಯರಿದು, ಮನಸೋತು ವಾನರಿ
ಬಗೆಯದೊಂದನು ತನ್ನನರ್ಪಿಸಿ ತಣಿದಳಾಚಪಲೆ.
ಖಗನ ದಯೆಯಿಂ ಗ್ರೀವದೇಶದೊ
ಳೊಗೆದು ಶೋಭಿಸಿತೊಂದು ಶಾಬಕ
ಸೊಗದ ಸುಗ್ಗಿಯು ಬೀರುತವದಿರ ಮನವ ಸೆಳೆದತ್ತು.

೩೨

ಗ್ರೀವದೇಶದಿನೊಗೆದ ಶಿಶು ಸು
ಗ್ರೀವನೆಂಬಾ ಪೆಸರ ತಳೆಯು
ತ್ತೋವಿ ಸೋದರವಾಲಿಯನು ಸೌಭಾಗ್ಯದಿಂ ಕೂಡಿ
ಕಾವನೆಲ್ಲಾ ಪ್ಲವಗತತಿಯನು.
ಭೂವರನ ರಘುರಾಮಚಂದ್ರನ
ಸೇವೆಗೆಯ್ವವನೆಂದು ಪರಸುತ್ತೋಡಿದನು ರವಿಯು.

೩೩

ಎಡಬಲದಲೊಂದೊಂದು ಸಿಸುವಂ
ಕಡುಗಿ ಕುಳ್ಳಿರಿಸುತ್ತಲವುಗಳ
ನಡೆನುಡಿಗೆ ಮೆಚ್ಚುತ್ತಲೆದೆ ಹಾಲೆರೆದು ಮುದ್ದಿಸುತ,
ಪಡೆದೆ ಮಕ್ಕಳ ಜನ್ಮಸಾರ್ಥತೆ
ವಡೆಯೆ. ಪೌರುಷಮೆರಡು ರೂಪವ
ಪಡೆದು ನಿಂದಿದೆ. ಪೀರಮೂತೆಯು ಪದಪಿ ತನ್ನದಲೇ !

೩೪

ದಿವದ ಪತಿಯುಂಶದಲಿ ಪಿರಿಯುನು,
ದಿವಸಪತಿಯುಂಶದಲಿ ಕಿರಿಯುನು,
ಭುವನಮೂರರ ಶೌರ್ಯತೇಜಗಳೆನ್ನೊಳುದಿಸಿರಲು
ಬವಣೆಯಿನ್ನೆಲ್ಲಿಯುದು ? ಜನ್ಮಕೆ
ಸವನಿಸಿತ್ತಲೆ ಸಾರ್ಥಕತೆ! ವಿಧಿ
ಸೆವಮುನೇನನೊ ಪೇಳ್ದನಾಸುಡಿ ಸೊಗಸಿತಿಲ್ಲೆನಗೆ.

೩೫

ಎಂದು ಸಂತಸದಿಂದ ಕಪಿಯಿರ
ಲೆಂದಿನಂದದಿ ದಿನಪ ಪಡುವಲ
ಮಂದಿರಕೆ ನಡೆತಂದು, ಭುವನದ ರಾಜ್ಯಭಾರವನು
ಅಂಧಕಾರಂಗೊಪ್ಪಿಸಿದನಿವ
ನೊಂದೆ ಬಗೆಯಿಂ ಮುಬ್ಬು ಹೊರಗೊಳ
ಗೊಂದಿಸಿದ. ಕಾಲಕ್ಕೆ ಕಾರಣ ರಾಜನೇ ನಿಜವು.

೩೬

ಕಪ್ಪು ಜವನಿಕೆ ಕಣ್ಗೆ. ಕರ್ಣಕೆ
ದಪ್ಪ ಕಪ್ಪಿನ ಮುಚ್ಚಳವು. ತೊಗ
ಲಪ್ಪಿಕೊಂಡಿರೆ ಕರಿಯ ಗವಸೆದೆಯುಪ್ಪ ತಾಮಸವು.
ಬೆಪ್ಪುಹಿಡಿದಂತಾಗಿ ಜೀವರು
ಸೊಪ್ಪು ಸೊವಡಾಗುತ್ತೆ ಮಣಿದರು
ನಿಪ್ಪೊಸತು ಸಾಮ್ರಾಜ್ಯ ಪಸರಿಸಿತೆಲ್ಲ ಕಡೆಯೊಳಗೆ.

೩೭

ಘೂಕಜಂಬುಕಭಟರ ಬೆದರಿಕೆ,
ಭೀಕರರ ಪುಲಿಕಾಕರುಪಟಲ,
ಸಾಕುಸಾಕೆಂದೆನಿಪ ಕರಿಯುನ್ಮತ್ತತೆಯ ಬಿರುಬು,
ಲೋಕದೊಳ್ ಪಸರಿಸಲು, ಜನರವ
ವೇಕಿಯೊಡತನಕಂಜಿ, ಮೌನದಿ
ನೂಕುತಿರ್ದರು ಕಾಲವೆಲ್ಲವ ಮೂಕರಂದದಲಿ.

೩೮

ವಿಧಿಯುಸಗಲುತ್ರೋಟಿದಾಯುಸ,
ಪದುಮವನದೊಳ್ಕಣಿತದುಬ್ಬಸ,
ತ್ರಿದಿವಪತಿಭಾಸ್ಕರರ ಮೇಳದಿನೊಗೆದ ಒಲ್ಸೋಲು.
ಒದಗಿ ಮುಪ್ಪುರಿಗೊಳಲು, ವಾನರ
ಯೆದೆಗವಚಿ ಸುತರಿಬ್ಬರನು, ಸಂ
ಮುದದಿ ನಿದ್ದೆಯ ಹೊದ್ದು ಮೈಮರೆದತ್ತು ನಿಮಿಷದಲಿ.

೩೯

ಕಾಲಚಕ್ರವು ಚಲಿಸೆ, ಪೊಸನರ
ಪಾಲಕನ ಪಟ್ಟಕ್ಕೆ ತಳಿರಿನ
ಮೇಲುಕಟ್ಟನು ಕಟ್ಟಿದಂದದೆ ಕೆಂಪು ಮೂಡಿದುದು.
ಬಾಲರವಿಯುದಯಾದ್ರಿಪೀಠವ
ಲೀಲೆಯಿಂದಡರಿದನು. ತಾಮಸ
ಜಾಲಶೃಂಖಲೆಯಿಂದ ಬಿಡುಗಡೆಯಾಯ್ತು ಲೋಕಕ್ಕೆ.

೪೦

ನಿದ್ದೆ ಪರಿದುದು. ಪಸುಳೆಗಳು ಮೊದ
ಲೆದ್ದು ಪಸಿವಿನ ಬೇಸೆಯಣಗಿಸೆ
ಮುದ್ದು ಪಡೆಯಲ್ಕೆಂದು ತಾಯಿಯನಡ್ಡಯಿಸಲವಳು,
ಮುದ್ದುಗುವರರ್ಗೊಲಿಯುತೆದೆಯೊಳ್
ಸಿದ್ಧಮಾದಮೃತವನು ನೀಡುವ
ಬುದ್ಧಿಯಿಂ ಸಂವರಿಸುತಿದೆಯನು, ತಾಳ್ದಳಚ್ಚರಿಯ.

೪೧

ಏನಿದೆತ್ತಣ ಚಿತ್ರ! ರೂಪಮಿ
ದೇನೊ ಮಾರ್ಪಟ್ಟಿತ್ತು! ಸಿಸುಗ
ಗ್ಗೇನನೀವೆನು? ಪುರುಷರೂಪಮೆ ಮತ್ತೆ ಘಟಿಸಿತಲಾ!
ಕಾನನದ ಪಣ್ಣುಗಳು ಪಲ್ಲಿಲಿ
ಸೂಸುಗಳ್ಗಾಹಾರಕೊದಗವು.
ಮಾಸಗೆಟ್ಟಿಲ್ಲಿಂದ ತಿರುಪೆಯ ತಂದು ಪೋಷಿಪೆನು?

೪೨

ತಾನೆ ತಾನಾಗಿರ್ದೆ ; ಚಪಲತೆ
ಕಾನನಕೆ ತಳ್ಳಿತ್ತು ; ಮೋಹ ಸಂ
ತಾನ ಕಟ್ಟಿತು ಪೆಣ್ಣ ರೂಪದಿನದಕು ನೆಲೆಯಿಲ್ಲ.
ವಾನರನೆ ತಾನಾದೆ ಶಿಶುಗಳ
ಮಾನದಿಂದಿವುಗಳನು ಕಾಪಿಡ
ಲೇನ ಮಾಡುವೆನೆಲ್ಲಿಗೆಯ್ದುವೆನೆಂದು ಚಿಂತಿಸಿತು.

೪೩

ತೊಡಕು ಪೆರ್ಚಿತು. ಬಾಲಕಂಗಳಿ
ಗೊಡಲ ತುಂಬಲ್ಬೇಕು. ತನ್ನನು
ಪಡೆದ ಬೊಮ್ಮನ ಕಾಣ್ಬೆನಿಲ್ಲಿರಲೆಡರದೇಂ ಬಹುದೋ !
ಒಡೆಯನಾತನ ಬೇಡಿ ದುಃಖದ
ಗಡಿಯ ದಾಂಟುವೆನಲಸನಾದೊಡೆ
ಬಿಡವು ತೊಡಕುಗಳೆಂದು ಮಕ್ಕಳ ಪೊತ್ತು ಪೊರಟಿತ್ತು.

೪೪

ತಂದೆವಾತನು ವಿಹಾರಿ ಮನ ಬಂ
ದಂದದಲಿ ತಿರುಗಿದೆನು ; ಪಿಳ್ಳೆಗ
ಳಿಂದೆ ಕೂಡಿದೆ ; ತಪ್ಪು ಕಣ್ಣಿಗೆ ಕಟ್ಟಿದಂತಿಹುದು.
ತಂದೆಯಲ್ಲವೆ ! ಪೆತ್ತ ತನ್ನಯ
ಕಂದನನು ಹೊರದೂಡಲಾಪನೆ ?
ಸಂದೆಗಕೆ ನೆಲೆಯಿಲ್ಲವಾತನ ಬಳಿಯ ಸೇರುವೆನು.

೪೫

ಎನುತಲಾ ಕಪಿ ನಡೆದು ಮುಂದಕೆ;
ವನಜಭವಸಮ್ಮುಖಿ ಮಣಿಯಲ್,
ವನಜಮುಖಿ ಸರಸತಿಯು ಕಾಣುತೆ ಕಾಂತನಂ ಕುರಿತು,
ಮನೆಯ ಬಿಟ್ಟೋಡಿರ್ದನಿಂದಿನ
ದಿನದೆ ಬಂದಿಹ; ಶಿಶುಗಳೀರ್ವರ
ಮನೆಗೆ ತಂದಿಹನಾರಿಗವುಗಳೊ! ಜನದ ಪಿಸಾರಿತೆನೆ

೪೬

ಮುರಿದು ಬೊಮ್ಮನ ನೋಟ ಫಲ್ಲನ
ಸರಸತಿಗೆ ನಗುತೆಂದ ನೋಡಾ
ವರಸುಪೌತ್ರರ, ಮಗನ ಮಕ್ಕಳ, ಮಗಳ ಮಕ್ಕಳನು!
ಪಿರಿಯ ಹಬ್ಬವು ನಿನಗೆ. ನೀನಿ
ನ್ನರಿಯಲಜ್ಜಿಯೆ ದಿಟವು. ಶಿಶುಗಳ
ಪೊರೆದು ಲಾಲಿಸು. ಪೇರ್ಗೆಹೊತ್ತಗೆಯಿರಿಸು ಮೂಲೆಯೊಳ

೪೭

ನೀಂ ಪಿತಾಮಹನಲ್ಲ! ಬಾಲೆಯು
ನೋಂಪಿಗೆಯ್ವಳು ಕೃಪಣಿಯೆ! ವಿಧ
ನೀಂ ಪೆರರ್ಕಳ ಫಾಲಲೇಖನಕಜ್ಜಿಯಾಗುವುದು
ಏಂ ಪಿರಿದೊ! ಜೋಗುಳಕೆ ಬೇಣೆಯು
ದೇಂ ಪೊರಗಹುದೆ? ತೊದಲುನುಡಿಗಳಿ
ಗಾಂ ಪುಸಿಯೆನೀ ತೊಡಕಿನೊಗಟಿಯ ಕಿತವರಾಗಿಹಿರೇ!

೪೮

ತಿಳಿಯದಾದೆನು ನಿನ್ನ ಮಾತಿನ
ತಿಳಿಯು ದೇವನೆ. ಪೊರೆಯುಲೀಶಿಶು
ಗಳನು ಪೊತ್ತಿಹೆ ನಾಲ್ಕು ಕೈಗಳನಿಲ್ಲ ಬೇಸರವು.
ತಿಳಿಸು ಸೀಸೀಯೊಗಟಿಯರ್ಥವ
ನೆಳೆಯರೆನಗಹರೆಂತು ನೊಮ್ಮರು ?
ಪೊಳೆಯದರ್ಥವು ಮಗನ ಮಕ್ಕಳು, ಮಗಳ ಮಕ್ಕಳೆನೆ.

೪೯

ಗಂಡು ತಾನಾಗಿರ್ದ ಪೊರನು
ಕಂಡು ಸರಸಿಯ ನೀರ ಹಂಗನು
ಚಂಡಕಿರಣನ ರಂಶದಿಂದೀ ಪುತ್ರರತ್ನಗಳು
ಒಂಡೆಯೊಂದರ ನೋಲೆ ಸಿರಿಯೊಳು
ದಂಡೆಗೆತೆದನ ಸಿದ್ಧಿಗೆಯಿಲ್
ಗಂಡು ಮನುಷ್ಯನ ತೆರದಿನಾದನು ಸಾಲದೇ ಕಥೆಯು ?

೫೦

ಅಹಹ ತಿಳಿಯಿತ್ತಿವನು ಗಿರಿಜೆಯು
ವಿಹರಿಸುವ ಕೊಳದಲ್ಲಿ ಮಿಂದನೊ !
ಬಹುದು ಪೆಣ್ಮಣಿರೂಪಮಂತಿರೆ. ಮೋಣು ಸಿದ್ಧೆಯನು
ಗಹನ ಪರ್ವತದಲ್ಲಿ ಗೆಯ್ದನೊ !
ಗಹನದಲಿ ಬಳಲಿದನು. ಮಕ್ಕಳಿ
ಗಹೆನು ನಾನೇ ದಾದಿ ಶಿಶುಗಳ ನೇವೆ ದೇವನದು.

೫೧

ಎಂದು ಶಿಶುಗಳ್ಗೊಲಿದು ಶಾರದೆ,
ಮಂದಹಾಸದ ಪಾಲನೂಡಿಸು
ತಂದವಾದ ಕಟಾಕ್ಷಕವಚವ ತೊಡಿಸಿ, ಮೆಯ್ದಡವಿ ;
ಇಂದ್ರಸೂರ್ಯರ ಪುತ್ರರಿರ, ನೀ
ವೊಂದಿ ಕಪಿಸಾಮ್ರಾಜ್ಯಪದವಿಯು
ಸಂದು ಪರಸುತೆ ಮುದ್ದಿಸಿದಳಾ ಶಾಬಕಂಗಳನು.

೫೨

ದೇವಿ ಹರಕೆಯನಿತ್ತವೋಲಿ
ನ್ನಾವು ಸಮ್ಮತಿಗುಡಲೆ ಬೇಹುದು.
ಜೀವಕೋಟಿಯುಲಿರ್ಪ ಮರುಕಕೆ ಪೆಣ್ಣೆ ದೇವಿಯಲೇ !
ಓಪ ಪೊಡೆಸೋಡಿಕ್ಕೆ ಬೋನವ,
ಕಾವ ಬಿರುದನು ತಳೆದು ಶೋಭಿಪಿ
ರಾವು ನಿಮ್ಮಯ ನುಡಿಯ ಮೀರ್ದೊಡೆ ನಿಲ್ವುದೇ ಗೃಹವು ?

೫೩

ಪಾಕಶಾಸನಪುತ್ರನಿವನ ವ
ನೌಕಕಪಿಭಲ್ಲೂಕನಿಕರ
ಕ್ಕೇಕಚಕ್ರಾಧಿಪನ ಮಾಡುವೆನೆಂದು ವೇಧನನು
ನಾಕನಿಲಯದ ಭಟರ ಕರೆದಭಿ
ಷೇಕಮಂ ಗೆಯ್ಯಲ್ಕೆ ನೇಮಿಸ
ಲಾಕೆವಾಳರು ಸಜ್ಜುಗೊಳಿಸಿದರೆಲ್ಲವಸ್ತುಗಳ.

೫೪

ಜಯಕೆ ನೆಲೆಯೆನಿಸಿರ್ಪ ಕಿಷ್ಕಿಂ
ಧೆಯನು ಶಿಲ್ಪದ ಘನತರದ ಸೀ
ಮೆಯನು ನಿರ್ಮಿಸಿ ವಿಶ್ವಕರ್ಮನು ಬೇಡಗೆಯ್ದಿಹನು.
ನಯನಕುತ್ಸಹವೀವ ಸೌಧನಿ
ಚಯಗಳಿಂ ರಂಜಿಸುವ ಬೀಡಿಗೆ
ಪಯಣಕುಜ್ಜುಗವಾಗಲೆಂದನು ನೆರೆದ ಸಭ್ಯರಿಗೆ.

೫೫

ಸುರರು ದಿಕ್ಪಾಲಕರು ನಾಗರು
ನರರು ಮುನಿಗಳು ಪಯಣಗತಿಯಿಂ
ನೆರೆದು ಕಿಷ್ಕಿಂಧೆಯಲಿ, ವಾಲಿಗೆ ಪಟ್ಟಗಟ್ಟಿದರು.
ಧರೆಯ ಗಿರಿವನಗಳಲಿ ಗಹ್ವರ
ಪರಿಸರಂಗಳಲಿರ್ದ ವಾನರ
ರೆರೆಯನನು ಪಡೆದತುಲದುತ್ಸಹದಿಂದಲುಬ್ಬಿದರು.

೫೬

ಹನುಮ ಜಾಂಬವ ನಳನು ಮೊದಲಹ
ವನಚರರು ರಾಜ್ಯಾಧಿಕಾರವ
ನನುನಯದಿ ಗೆಯ್ಯುತ್ತೆ ವಾಲಿಯ ಸೇವಿಸುತ್ತಿರಲು,
ದಿನಪಸುತನೊಡಗೂಡಿ ವಾಲಿಯು
ದಿನದಿನಕೆ ಬಲಬುದ್ಧಿವಿಭವದಿ
ನನುಪಮನು ತಾನೆನಿಸಿ ತಣಿಸಿದ ಸಕಲಕಪಿಕುಲವ.

೫೭

ಇತ್ತ ಭಲ್ಲನು ಸುತರ ಮೇಲ್ಮೆಯಿ
ನತ್ಯಧಿಕ ಸೊಗವಾಂತು, ತನ್ನಯ
ವೃತ್ತಮಂ ಪರಿಭಾವಿಸುತ್ತಲಿ ನಾಣ್ಚಿ ನಿಂದಿರಲು,
ಪತ್ತೆ ಸೆಳೆಯುತೆ ವಿಧಿಯು ಪುತ್ರನ
ಚಿತ್ತದುಸ್ಥಿತಿಗಾಗಿ ತತ್ತ್ವದ
ಮೊತ್ತವನು ಪರುಠವಿಸಿ ಶಾಂತಿಯ ನೂಸಿದನು ಮನಕೆ.

## ದ್ವಿತೀಯತರಂಗ

## ವಿವಾಹ

ಮೊಗದ ಹೋಲಿಕೆ, ಕಣ್ಣುಕೈಕಾ
ಲುಗಳ ಪರಿಮಿತಿ, ರೂಪಕಾಂತಿಯು,
ಬಗೆಯ ಕುಶಲತೆಯಿಂದ ವಾಲಿಯ ಪೋಲ್ತು ತಮ್ಮನಿರೆ,
ಮಿಗುವ ಬೆಮೆಯಾವರಿಸೆ ಲೋಕವ,
ನಗೆಯ ಪರಿವಾರಕ್ಕೆ, ಜಾಣರ
ಬಗೆಗೆ ಬೆರಗನು ನೂಸಿ, ಬಳೆದರು ಜಂಟಿದೇವರೊಲು.

೧

ಅಣ್ಣತಮ್ಮಂದಿರೊಳು ಭೇದವ
ಕಣ್ಣಿಗುಂ ಕಣ್ಣಿಟ್ಟು ಪುಡುಕುತೆ,
ಬಣ್ಣಿಸಲ್ಕಾರದೆಯೆ ಸೇವಕದಾಸದಾಸಿಯರು
ಅಣ್ಣನೆಸಕವ ತಮ್ಮನಲಿ ಮೇ
ಣಣ್ಣನಿಗೆ ತಮ್ಮನದನರ್ಪಿಸಿ
ಬಣ್ಣಗುಂದಿದ ಮೊಗವ ಬಾಗಿಸಿ ಮೂಕರಾಗುವರು,

೩

ಶಿಷ್ಟಮಾರ್ಗದೆ ನಡೆಯುತಾಗವು
ಶಿಷ್ಟವಹ ಕರ್ಮವನು ಗೆಯ್ಯುತೆ,
ತುಷ್ಟಿಪಡಿಸಿದರೆಲ್ಲ ದೇವರ ಕಾಲಕಾಲದೊಳು.
ಇಷ್ಟಬಾಂಧವನಿಕರವನು ಪರಿ
ಪುಷ್ಟಿಗೊಳಿಸಿದರಾತ್ಮದೇಹವ
ತುಷ್ಟಿಪುಷ್ಟಿಯನೀವ ವಿದ್ಯೆಯ ಸಾಧಕದ ಬಲದಿ

೪

ಬೆಳೆದ ಹೆಮ್ಮರಗಳನು ಬೇರಿಂ
ದಿಳೆಯುಸಗಲಿಪ, ಸಾಲವೃಕ್ಷವ
ನೆಲಗೆ ಪರ್ಣವನೊಂದನುಳಿಸದೆ, ಬೆಟ್ಟಗುಡ್ಡಗಳ
ತಳೆದು ತಿರಿಕಲ್ಲಾಟವಾಡುವ,
ಬಲದ ಸಾಹಸ ಲಾಘವಂಗಳ
ಬಳಕೆ ವಾಲಿಗೆ ಪೂಸಲಾದುದು. ಪುಟ್ಟಸಿನ್ನೊರ್ವ.

೫

ಅರಿಗಳೆದೆ ಬಿರಿಯಿತ್ತು ; ಸುಜನರ
ಹರಕೆ ದೆಸೆದೆಸೆಯಲ್ಲಿ ವೊಳಗಿತು ;
ಸುರಪದಿಸಪರ ಚಿತ್ತದುನ್ನತಿ ಕೋಡಿವರಿದತ್ತು.
ಧರಣಿಯೊಳು ಸದ್ಧರ್ಮ ಸಾಲ್ಗಂ
ಚರಣದಿಂ ಸಲಿಸಿತ್ತು. ವಾಸರ
ವರನ ವಾಲಿಯು ರಾಜ್ಯಭಾರದಲೇರಿತುತ್ಸಹವು.

೬

ತರಣಿಯೊಡನುಪ್ಪವಡಿಸುತೆ, ತ
ತ್ಕಿರಣದೊಡನೆ ಚತುಸ್ಸಮುದ್ರಕೆ
ಪರಿದು, ಸಂಧ್ಯಾಜಪತಪಾದಿಯನೊಡರಿಸುತ್ತಲವ
ಚರಿಸಿ ವಾಯು ಮನೋಜವಂಗಳು
ಸರಿದೊರೆಗಳಲ್ಲವೆನೆ, ರಾಜ್ಯದ
ಭರಕೆ ವಾಲಿಯು ಸೂರ್ಯನೊಗ್ಗೈಯೇರೆ ಬರುತಿಹನು.

೭

ಸುಂದರೋನ್ನತಕಾಯಭುಜಬಲ
ದಿಂದ, ಕಾರ್ಯೋತ್ಸಾಹಕುಶಲತೆ
ಯಿಂದ, ಸಂಪದದಿಂದ ಚಲದಿಂದುನ್ನತರುಮಾಗಿ;
ಬಂದ ಸಿಹಿಮಾಕಂದವೆನೆ ಸಂ
ಕ್ರಂದನಾರ್ಕರ ಸುತರು ಶೋಭಿಸ
ಲಂದು, ರಾಜ್ಯಶ್ರೀಗೆ ಸವತಿಯ ಬಯಕೆಯಾದತ್ತು.

೮

ಕ್ಷೀರವಾರಿಧಿಯಿಂದಲಮೃತದ
ಸಾರಮಂ ಗೋರುತ್ತೆ, ಸುರರಿಗೆ
ಭೂರಿಭೋಜನಪಿಕ್ಕುತಜರಾಮರರನೆಸಗುತ್ತೆ,
ಮೂರು ಲೋಕಕೆ ವೈದ್ಯಪದ್ಯೆಯ
ಸೂರೆಗೊಟ್ಟುಪಕಾರವೆಸಗಿದು
ದಾರಿಧನ್ವಂತರಿಯ ಪುತ್ರ ಸುಷೇಣ ಮೆರೆದಿಹನು.

೯

ಕುತ್ತಗಳ ಕಿರುಳರಿತು, ಮರ್ದಲಿ
ಪತ್ತಿದಾಗುಣಗಣವ, ಯೋಜನೆ
ಯುತ್ತಣಿಂ ಬಹ ಮಾರ್ಪನದರ ಫಲಾಫಲಂಗಳನು,
ಬಿತ್ತರದೆ ತಿಳಿಯುತ್ತಲಾ ಯಾ
ಕುತ್ತಗಳ ದೇಹಗಳ ಬಗೆಯರಿ
ದಿತ್ತು ಮರ್ದ ಸುಷೇಣ, ತಂದೆಯು ಮೀರಿ ಬೆಳಗಿದನು.

೧೦

ಆತಸುದರದೆ ಜನಿಸಿ ಧರ್ಮದಿ
ನೀತಿ ಮೊಳೆಯಿಟ್ಟಂತೆ, ಗುಣದಿಂ
ಖ್ಯಾತಿ ಮಾಡುವ ತೆರದೆ ತಾರಾದೇವಿ ರಂಜಿಪಳು.
ಜಾತರೂಪದ ಬೊಂಬೆ, ನೃಪನಯ
ಜಾತದೆರಕದ ಪಾಸು, ಯೌದಾ
ರ್ಯಾತಿಶಯದಿಂ ಸಮೆದ ಪುತ್ಥಳಿಯೆಂಬ ತೆರದಿಂದ.

೧೧

ಮೀರಿ ಭಾವಂ ಬಳೆದು ಕಾವ್ಯದ
ಸಾರಮೆನಿಸುವ ವಿಧದಿ, ಕಾಲದಿ
ಕಾರಮುಗಿಲೇರುತ್ತೆ ವರ್ಷದ ತೆರದಿ ನೆರೆವವೊಲು ;
ತಾರೆಯೊಳು ಯೌವನವು ಬಾಲ್ಯದಿ
ತೋರಿದಾ ರೂಪಾದಿ ಗುಣಗಳಿ
ನೇರಿ ಶೋಭಿಸಿದತ್ತು. ವೃಕ್ಷಕೆ ಬೀಜ ಕಾರಣವು.

೧೨

ತಕ್ಕವನ ಕೈಗಿಟ್ಟು ಸುಕೃತದ
ರೊಕ್ಕದೊಟ್ಟಿಲ ಗೋರುವುದು, ಮೇ
ಣಕ್ಕರೆಯ ಸುತೆಯುಗಲಲಾರದ ಲೋಭ ಬೆರೆದಿರಲು ;
ಅಕ್ಕಿಯಾಸೆಯು, ನೆಂಟಗನ್ನವ
ನಿಕ್ಕುವಾತುರವೆಂಬ ತೆರದಿಂ
ದುಕ್ಕುವೆರಡುಂ ಭಾವಗಳ ಸವಿಗಂಡನಾ ಪಿತನು.

೧೩

ಅಳಿಯನೋರ್ವನ ತನ್ನ ಮನೆಯೊಳ
ಗಿಳಿಸಿ, ತೆರೆಮರೆಯಲ್ಲಿ ನುಡಿಯಿಸು
ತೊಳಗಸರಿದುಪಚರಿಸಿ, ತೃಪ್ತಿಯ ಪಡೆವ ಜಾಣೆಯೊಲು ;
ತಿಳಿಯಮನದ ಸುಷೇಣಪತ್ನಿ ಮ
ಗಳನು ಪರರವಳೆಂದು ಪೇಳು
ತ್ತೊಳಗ ಮೆಚ್ಚುತೆ ಪತಿಯ ನೆಚ್ಚರಿಸುತ್ತಲಿರುತಿಹಳು.

೧೪

ಒಂದು ದಿನದೊಳ್ವಾಲಿ ಗರುಡಿಯ
ಮಂದಿರದಲೋರಗೆಯ ಕೆಳೆಯರ
ನೊಂದುಗೂಡುತಲೆಸಗಿ ಸಾಧಕಮಲ್ಲಯುದ್ಧಗಳ;
ಮಿಂದು ಕೊಳದೊಳ್ ಮಡಿಯನುಟ್ಟು, ಸು
ಗಂಧ ಪುಷ್ಪವ ತಳೆದು, ಬಿಸದಗ
ಳಿಂದಲುಬ್ಬುತಲಡಿಯನಿಟ್ಟನು ರಾಜಮಾರ್ಗದಲಿ

೧೫

ಜಾರುತಿರೆ ರವಿ ಪಡುವಲದ್ರಿಗೆ,
ತಾರೆ ತಾಯಿಯು ನೇಮದಿಂದಲಿ
ಸಾರಿ ಬಂದಳು ಗೌರಿಯರ್ಚನೆಗೊಡನೆ ಕೆಳದಿಯಳ.
ಸೂರೆಗೊಂಡು ಸವಿಾರ ಬಲಿಗಳ
ಸಾರವನು ಕೆಳದಿಯಳ ಕೆಯ್ಯಿಂ,
ತೂರಿದನು ದೆಸೆದೆಸೆಗೆ ವಾಸರರಾಜಸಿದಿರಿಸಲಿ.

೧೬

ಸೇರಿತೀರ್ವರ ನೋಟವುಗಲಿತು;
ಸಾರಿ ತೊಡಕಿತು ಮತ್ತೆ ಜಾರಿದು
ದೋರೆ ನೋಟವು ಸೊಬಗನಳೆಯಿತು ನೀವಳೆಯು ತೆಗೆದು.
ಹಾರಿತೆದೆ, ನಸು ತಡೆಯೆ ಗಮನವು,
ಹೇರೆ ಪುಲಕವು, ಮೊಗವು ಬಾಗಿರೆ,
ತಾರೆವಾಲಿಗಳರವುಪುರುಷರ ತೆರದೆ ಸಾಗಿದರು.

೧೭

ತೊಡಗಿ ಪೂಜೆಗೆ ತಾರೆ ಧೂಪದ
ತೊಡಕ ಬಿಟ್ಟಳು; ಹಣ್ಣು ಹೂವೆಸೆ
ಮುಡಿಗೆ ಸೇರಿಸಿ ಹಿಂದುಮುಂದಿನ ಕ್ರಮವ ತಪ್ಪಿದಳು.
ಎಡುಕುತೆಚ್ಚರಗೊಂಡು, ಕೆಳದಿಯು
ಕಡೆಗೆ ನೋಡುತಲಳುಕುತೆದೆಯೊಳ
ಗಿಡದ ಗರವನು ತಿಳಿಯಳಾದುದು ಪೂಜೆ ಬಹುಬೇಗ,

೧೮

ಪೊರಟಳಲ್ಲಿಂ ಮನೆಗೆ ನೋಲುದು
ಸೆರಗ ಬಾಯ್ದೆರೆಗಿಕ್ಕಿ, ಮನದಾ
ಪರಿಯನದುಮುತೆ ಪೋಗುತೆಡಬಲಕಿನಿತು ಗಮನಿಸದೆ,
ಮರೆದು ಮಾತೆಯ ಸೇವೆಗೆಯ್ವುದ.
ಸರಿದು ತನ್ನಯ ಚಿತ್ರಶಾಲೆಗೆ,
ಭರದಿನೆಚ್ಚರಗೊಂಡು, ತಾಯಿಯ ಪದಕೆ ನಮಿಸಿದಳು.

೧೯

ಮಗಳನೆಬ್ಬಿಸಿ ನಾಕೆ ಪರಸುತೆ,
ಮೊಗದೊಳೊಗೆದಿಹ ಮಾರ್ಪ ಕಂಡಳು.
ಸುಗಿದು ಮಗಳನು ಲಾಲಿಸುತ್ತಲಿ ಮಧುರವಚನದಲಿ.,
ಮಗಳೆ, ದೂಸರದೇನೊ ಮೆಯ್ಯೊಳು ?
ನೊಗದ ಸಿರಿ ಮಾರ್ಪಟ್ಟಿತೇಕೋ ?
ತಗುವ ಮರ್ದನು ಸವಿದರಾಯಿತು ಬಾರ ಪಿತನೆಡೆಗೆ.

೨೦

ಎಂದು ನಾಕೆ ಸುಷೇಣನಲ್ಲಿಗೆ
ಬಂದು, ಪುತ್ರಿಯಳಿರವ ಪೇಳಲು
ಮಂದಗತಿಯಿಂ ಬಂದು, ತಾರೆಯ ಹಸ್ತದೊಳು ಬೆರಲ
ಬಂದಿಸುತೆ, ಕಣ್ ನಾಲಗೆಯ ಮೊಗ
ದಂದವೆಲ್ಲವ ನೋಡಿ, ಮೆಯ್ಯೊಳು
ದಂದುಗವನವನೊಂದ ಕಾಣದೆ, ಮುಗ್ಧನಾಗುತ್ತೆ;

೨೧

ವಾತಪಿತ್ತಾದಿಗಳ ಏಷವುತೆ,
ಧಾತುಸಪ್ತಕದೇರುಪೇರುಂ,
ಘೂತನಾಡಿಯು ಹೊಡೆತವೊಂದನು ಕಾಣೆನ್ ರಮಣಿ.
ಏತಕೀಪರ ಮೊಗದೆ ಮಾರ್ಪೊ ?
ಕಾತರಕೆ ನೆಲೆಯಿಲ್ಲ ವೃದ್ಧೆ
ಗಾತ್ರಶಯುಮೇಸಿಹುದೊ ತಿಳಿಯದು. ಪಥ್ಯ ತಣ್ಣನಿಸು.

೨೨

ಗಂಡನಾ ನುಡಿಯಲ್ಲ ನಂಬುಗೆ
ಕಂಡುಬಾರದು ; ವೈದ್ಯರತ್ನಕ
ರಂಡದಲಿ ಪುಸಿ ಬಗೆಯಲಾಗದು ; ನಾಕೆ ಶಂಕಿಸುತ
ಕೊಂಡು ತಾರೆಯು, ದಾದಿಯುಳನೊಳ
ಗೊಂಡು, ಮಾರ್ಗದೆ ದೇವಕುಲದೊಳು
ಕಂಡುದೇನುಂಟಿಲ್ಲವನು ಸೀಂ ಬೆಸಸಿಮೆಂದೆನಲು.

೨೩

ಮಾತಿನಲಿ ಮೊದಲಿಕ್ಕಿದರೆ ತಾ
ಸೋತು ಹೋದವಳಲ್ಲ ತಾರೆಯು.
ಭೀತಿಯಿಂದಂದುಸಿರಸಿಕ್ಕದೆ ನೆಲನ ನೋಡಿದಳು.
ಏತಕಿಂತಿವಳೆನುತ ದಾದಿಯು
ಮಾತನಾಡಿಸಲವಳು ಭಯದಿಂ
ಕಾತರಿಸಿ, ತನಗೇನೊ ಎಂತೋ ಎಂದು ನಡುಗುತ್ತ,

೨೪.

ತಟ್ಟಿಗೊಂಡೆನು, ಬಿಟ್ಟೆ ಮನೆಯನು,
ಪುಟ್ಟತಾಯಿಯು ಬಿಟ್ಟೆನಿಲ್ಲವು,
ಕೆಟ್ಟಕಣ್ಣಿಗೆ ಬೀಳಲಿಲ್ಲವು ಒಟ್ಟಿಯೊಳು ತಾರೆ;
ಕೆಟ್ಟಗಾಳಿಯು ತಟ್ಟಿಹೂಗಳ
ಸಿಟ್ಟು ತಾರೆಯ ಮುಟ್ಟಿ ಹೋದುದು.
ಸಿಟ್ಟಿಸಿಹಸಿದ ವಾಲಿ ಪೂಜೆಯು ಕೆಟ್ಟಿತೆಂದೆನಲು

೨೫

ಪ್ರಾಸಪಲ್ಲಂಗೇಳಿ ಸುಂಗೆ ಪರ
ಹಾಸಗೆಯ್ಯುತೆ ತಾರೆ ಸಿಂದಳು.
ವಾನವಾತ್ಮಜನೆನಲು ಕಿಸಿಸಿಂ ದಾದಿಯುನು ನೋಡಿ,
ಓಸರಿಸಿ ಸರಿದೋಡಿ, ಮಂಚದ
ಪಾಸಿನೊಳ್ ಪವಡಿಸುತ್ತೆ, ದಾದಿಯು
ಶಾಸನಕೆ ಚಿಂತಿಸುತ್ತೆ, ತಪ್ಪನು ಕಾಣದಿರುತಿಹಳು.

೨೬

ಇತ್ತನಾಕೆಯು ಮಗಳ ಕುತ್ತವ
ಚಿತ್ತದೊಳ್ಪರಿಭಾಪಿಸುತ್ತಲಿ,
ಮತ್ತೆ ದಾದಿಯು ಕರೆದು ಪಿಸ್ವರದಿಂದ ಕೇಳಿದಳು,
ಹಿತ್ತಿಲಾಗಿಡ ಮುದ್ದು ದಿಟವಿದ
ಹೆತ್ತ ಮೋಹದೆ ತಿಳಿಯದಾದೆನು.
ಪತ್ತಿದುದ್ವೇಗವನು ತಪಿಪೆನು.. ಬಿನ್ನವಿಪೆ ಪತಿಗೆ.

೨೭

ಎಂದು ತಾರೆಯು ಬಳಿಗೆ ಸಾರುತ
ಲಂದಿನಾ ಸುದ್ದಿಯನು ಮರೆಯಿಸು
ತೆಂದಿನಂತಿರಲುಣಿಸು ಕತೆಯಿಂ ತಣಿಸಿ ಬೀಳ್ಕೊಟ್ಟು ;
ಬಂದ ಪತಿಯಂ ಕಂಡು, ಮಾತಿಂ
ಗೊಂದು ಪೀಠಿಕೆಗಾಗಿ ಕಾತುರ
ದಿಂದ ನಿಂದಳು. ಮಾತನೆತ್ತುವ ಭಾರ ಕಿರಿದಲ್ಲ.

೨೮

ತಾರೆಯುಂಡಳೊ ? ಅಹುದು. ಹೇಗಿಹ
ಳಾರಯಿದು ತಿಳಿ. ನಿದ್ರಿಸುತ್ತಿಹ (ಳು.)
ಳಾರಿಗಿನ್ನುಬ್ಬೆಗವು ? ಸಾಂಕ್ರಾಮಿಕವು ನಿನಗೆನಗೆ.
ಹೀರಿನೋಡಿಹೆ ವೈದ್ಯವಿದ್ಯೆಯ
ಸಾರವನು ಕಂಡರಿಯೆ ! ನಿನಗಂ
ಮಾರಿತೋರ್ಪುದುಮಿರಲುಮಾಗದೊ ? ಬಹುದು ಬಹುಜಾಣೆ

೨೯

ತಿಳಿಯ ಪೇಳ್ವುದು ಗುಟ್ಟನಾಕೆಯೆ.
ತಿಳಿಸಿ ದಣಿದೆನು ಮದುವೆ (ಗೆ.) ಗೋಹೋ !
ಅಳಿಯನೋರ್ವನ ಪಡೆವ ಬಯಕೆಯೊ ? ತರುವೆನೊಪ್ಪಿದನ
ಒಳಿತು ನಿಮ್ಮೊಪ್ಪಾದರಾಯಿತೊ ?
ಗೆಳತಿ ನೀನೊಪ್ಪಿದರು ಕೂಡದೊ ?
ತಿಳಿಯದೀಕಾಲಕ್ಕೆ ಮಗಳೊಪ್ಪೊಪ್ಪು ನಿನಗೆನಗೆ.

೩೦

ಒಪ್ಪೆ ಮಗಳುಂ ಪುಡುಕಿ ನೋಡುವೆ (ನು.)
ನೊಪ್ಪಿ ಪುಡುಕಿಟ್ಟಿಹಳು. ಸರಿ, ದೊರೆ
ತಿರ್ಪನಂತಿರೆ, ಪುಡುಕಿ ತರವಾ ಕಷ್ಟತಪ್ಪಿತಲೆ !
ತಪ್ಪಿತಿಲ್ಲವು ದಣಿವು ; ದೂರದ
ಲಿರ್ಪ ಚಿನ್ನವು ; ಚಿಂತೆಯುದರಿಂ
ದಪ್ಪಿಕೊಂಡಿದೆ. ರನ್ನವಿಲ್ಲರೆ ದೊರೆಯುದೇಂ ಚಿನ್ನ ?

೩೧

ದೊರೆಯು ವಾಲಿಯು ನೆಂಟು ಸುಲಭವೆ ?
ದೊರೆಯೆ ! ನಾಂಗಳು ಬರುವರಲ್ಲಾ !
ಬರುವರಾದೊಡವೇನು ! ತಕ್ಕವ (ಳು.) ಳವನ ಬಿಟ್ಟಂದು ?
ಅರಿದು ಮದುವೆಯೊ ಮೇಣು ಪೆರತೋ !
ಇರಲು ವಿಧಿಯಾ ಬರಹ ಸಾಧ್ಯವು-
ಬರಹವದ ತಿದ್ದಿಸಲು ಬಹುದಲೆ ? ನೋಳ್ಪೆನಂತಾಗೆ.

೩೨

ಗೆದ್ದು ಪತಿಯುಂ ನಾಕ ವಾದದಿ
ಸಿದ್ದೆವೋದಳು. ಚಿಂತೆಯೀತನ
ಹೊದ್ದಿದುದು. ಗೃಹಕೃತ್ಯ ದಂಪತಿಗಳಿಗೆ ಭಾಗವಲೇ !
ವೃದ್ಧರೆನಿಸಿದ ತಾಯಿ ತಂದೆಗ
ಳಿದ್ದು ನಮ್ಮಯ ನೆಂಟನೊಪ್ಪ
ಲ್ಕಿದ್ದರಲ್ಲವೆ ಹಗುರ ಕಾರ್ಯವು. ವಾಲಿ ತಬ್ಬಲಿಗಂ.

೩೩

ಪಿರಿಯನೋರ್ವನ ನೆರವು ಬೇಳ್ಪುದು
ತರುವೆನೆಲ್ಲಿಂದವನ(ನು)ನೋ ಹೋ!
ಸರಸಿಜೋದ್ಭವತನುಜಜಾಂಬವನಿರ್ಪ ದೊಡ್ಡಯನು.
ಇರುವುದವನೊಳ್ಸಲುಗೆ. ಬರುವನೊ
ಳೆರಕಮುಂಟಾದೊಡೆಯುಂ, ತನ್ನನು
ಸರಿಯಬೀಯುಗನಾಗಿ ಲೆಕ್ಕಿಪ ಭಾಗ್ಯಬಲ್ಪಿರದು.

೩೪

ನಾಳೆಯುಂದಯುದಲವನ ಕಾಣ್ಬೆನು.
ವಾಲಿಯಾತನ ಗೆರೆಯ ಪಿರಾರನು.
ಕಾಲಯಾಪನೆ ಶುಭಕೆ ಹಿತನಲ್ಲೆಂದು ನೆಲೆಗೆಯ್ದು ;
ತೊಳಿದನು ಯಾಮಿನಿಯನುದಯದೆ
ಬಾಲರವಿಯೊಡನೆಳ್ದು, ಜಾಂಬವ
ನಾಲಯಕೆ ನಡೆತಂದು, ನಮಯವ ನೋಡುತೊಳವೊಕ್ಕ.

೩೫

ಪತ್ತು ಸಾಸಿರಬರಿಸದಾಯುವು ;
ಚಿತ್ತದೊಳು ನೆನಪಾಯ್ತು ; ಬಂದ್ಯೆ!
ಕುತ್ತ ನಿನ್ನನು ಕಾಣದಿರ್ಪುದೆ ; ಕಂಡವೇಲಿಲ್ಲ.
ಇತ್ತಲೇಕ್ಕೆ ತಂದೆ ? ಮುತ್ತನ
ನೆತ್ತಲುಂ ಕೇಳ್ವರನು ಕಾಣೆನು.
ಪತ್ತೆ ಬಾರ್ರೈ ; ಕುಳ್ಳಿರೆಂದನು ಜಾಂಬವನು ನಗುತ.

೩೬

ಗೆಳೆಯನಾಗಿಯೆ ಬರ್ಪೆ. ವೈದ್ಯನ
ಬಳಕೆ ನಿನಗೆಂದಂದು ಬೇಡ್ಕೆ.
ಬಳುವಳಿಯು ನಿನಗಾಯುರಾರೋಗ್ಯಗಳು ಜಾಂಬವನೇ.
ಸುಳಿಯೆ ಸಮಯವ ಕಾಣೆ. ರೋಗಿಗ
ಳೆಳೆತ ಬಲ್ಬಿರುಸಾಯ್ತು. ಕಡೆಯೊಳ
ಗೆಳೆಯಳೋರ್ವಳ ಮದುವೆ. ಚಿಂತೆಯು ಕಟ್ಟಿತೆನಗೀಗ.

೩೭

ಪಿರಿಯದಲ್ಲ ಸುಷೇಣ. ನಿನ್ನಯ
ಪರಿಯನಾಂ ತಿಳಿದರ್ಪೆ. ತಾರೆಗೆ
ಪರಮವಿಭವದಿ ಮದುವೆಯಾಗಿಪೆ ನಾನೆ ನೀನಾಗಿ.
ಕರೆಯಿಸೈ ದೈವಜ್ಞಗುರುಗಳ
ನೆರೆಯಬೇಡಿನ್ನಾರ. ವೆಚ್ಚದ
ಭರವು ತನ್ನದು. ನನ್ನ ಮನೆಯೊಳೆ ಬಳೆಯಲೀ ಮದುವೆ.

೩೮

ಆರವು ಮರವು ಸುಷೇಣ. ಕೇಳ್ವುದ
ಮರೆತೆ. ತಾರೆಗೆ ಮದುವೆಯಾಗಿಪೆ,
ವರನದಾವನು ? ತಾಯಿಮಕ್ಕಳಿಗೊಪ್ಪೆ ? ಪೇಳದನು.
ಇರುವುದವರೊಪ್ಪಿತವು. ನಿನ್ನಯ
ನೆರವು ದೊರೆಯಲ್ವರನು ದೊರೆವನು.
ಪಿರಿಯದಾಗಿಹುದಯ್ಯ ಮದುವೆಗೆ ವರನನರಸುವುದು.

೩೯

ಅಕ್ಕಸಾಲಿಗನರಗು ಸಿದ್ಧವು ;
ಚೊಕ್ಕಚಿನ್ನವದೊಂದು ದೊರೆಯಲ್
ತಕ್ಕುದಾಭರಣವನು ಗೆಯ್ಯುವೆನೆಂಬೆಯೇಂ ಪುತ್ರ ?
ತಕ್ಕವರಸಿಹನವನನೊಪ್ಪಿಸೆ
ತಕ್ಕವನು ಹಿರಿಯಯ್ಯ ಮಂತ್ರಿಯು
ಸಿಕ್ಕಿಹನು ಜಾಂಬವನು. ತನ್ನಯ ಭಾರಮಿನಿತಿಲ್ಲ.

೪೦

ಭಾವು ಮುದುಪನ ಗುಡ್ಡಕೇರಿಸಿ,
ಕೂಪದೊಳು ದೂಡಿದೆ ಸುಷೇಣನೆ ;
ಭೂಪ ವಾಲಿಯಸಳಿಯನಾಗಿಸಿಕೊಳ್ವ ಹುಚ್ಚೇರಿ,
ಈಪರಿಯ ನವನಾಟ್ಯನಿನ್ನದೊ ?
ಚಾಪಲವು ಪಿರಿದಾಯ್ತು. ಜೀಯಗ
ನೀಪರಿಯ ಸಂಧಾನಕೊದಗನು. ನಿಲುಕದೈ ಫಲವು.

೪೧

ಕುಲದ, ಶೀಲದ, ಗುಣದ, ರೂಹಿನ
ಬಲವು ಪೆರ್ಮೆಯು ನಿಮ್ಮ ವಾಲಿಯ
ನೊಲಿಸಲಿಹುವೆಂದೆಂದೆ ಬಂದೆನು. ಬಡತನಮದೊಂದು
ಒಲಿದರಾದೊಡೆ ನೀವು ಪರಿವುದು.
ಚಲದಿನೆಮ್ಮನು ತಳ್ಳಬೇಡಿ
ನ್ನಲಸು ಕೂಡದು. ಪೆಣ್ಣಪೆತ್ತನ ಹೊರೆಯ ಬಲ್ಲಿರಲೇ.

೪೨

ಶೀಲಕುಲಗಳಲಿಲ್ಲ ಕೊಂಕು. ಎ
ಶಾಲಹೃದಯದ ಬಳಕೆ ಬೇಹುದು.
ವಾಲಿ ಚಕ್ರೇಶ್ವರನು ; ನೋಟದ ಪರಿಯದೆಂತಿಹುದೋ !
ಮೇಲೆ ಯುವಕನು. ದೊಡ್ಡಯನ ನುಡಿ
ಪಾಲಿಸಲ್ಕದು ಹಗುರವೈಸಿರಿ
ಲೋಲುಪತೆ ಯೌವನವು ಸೇರಿರೆ ತೊಡಕು ನಿಶ್ಚಯವು.

೪೩

ಇರಲಿ ಮಿತ್ರನೆ ನೋಳ್ಪೆನಾದೊಡೆ
ಭರವಸೆಯ ಕುಡಲಾರೆ. ದೈವದ
ನೆರವುದೊಂದಿರೆ ನಾನೆ ಬೀಯಗನಾಗಿ ಕುಣಿಸುವೆನು.
ಕರೆಯಿಸುವೆ ನೀಂ ಪೋಗು. ನಾನುಂ
ನೆರವೆ ಕಾರ್ಯಕೆ. ಕುವಲಯೇಶ್ವರ
ದೊರೆತು ತಾರೆಯ ಸಲುಗೆ ಬರೆ ತತ್ಕ್ಷಣದೆ ಬರ್ಪುದಲೇ.

೪೪

ಎಂದು ಜಾಂಬವ ರಾಜಗೃಹಕ್ಕೈ
ತಂದು, ರಾಜ್ಯದ ವಿವಿಧಭಾರದ
ಕುಂದು ಕೊರತೆಯ ತಕ್ಕುಪಾಯಗಳಿಂದ ತಿದ್ದಿದನು.
ಎಂದಿನಂತಿರೆ ರಾಜಕಾರ್ಯವ
ಮುಂದಿಗರ್ಪಿಸಿ ಭೂಪತಿಗೆ ಸಂ
ಕ್ರಂದನನ ಪುತ್ರನಿಗೆ ಬಿನ್ನಹ ಮಾಡಲೆಯ್ತಂದ.

೪೫

ಜೀಯ ದೇವ ಹಸಾದ ಮುಗಿದುವು.
ಬಾಯ ಮಾತಿನೊಂದು ವಾಲಿಯೆ,
ಬಾ ಯೆನಗೆ, ನನಗೇನು, ನಿನಗಂತೆಲ್ಲರಿಗೆ ಏಹಿತ.
ಕಾಯುತಲಿ ನೀಂ ಬ್ರಹ್ಮಚರ್ಯದ
ದಾಯವನು ಬಲಬುದ್ಧಿತೇಜವ
ನಾಯತದೆ ಪಡೆದಿರ್ಪೆ. ಮುಂದಿನ ಏಷಯವೊಂದಿಹುದು.

೪೬

ಬಲ್ಲೆ ದೊಡ್ಡಯ ರಾಜ್ಯಭಾರವು
ನೆಲ್ಲ ಬಾಲನ ತಲೆಗೆ ಕಟ್ಟುತೆ
ಮೆಲ್ಲನಿಲ್ಲಿಂ ಸರಿದು ಯೋಗಕೆ ನಿಲ್ವರೆಂಬುದನು.
ಸೊಲ್ಲನಂದೇ ಕೇಳ್ದೆ. ಯೋಗವು
ನಿಲ್ಲೆ ಮಾಡಿದೊಡಾಯ್ತು. ಮನೆಯೊಳ್
ಬಲ್ಲ ದೊಡ್ಡವರಿಲ್ಲ. ರಾಜ್ಯದ ತೊಡಕಿಗಾನಿಹೆನು.

೪೭

ಅಂತುಟಲ್ಲವು ಮಗುವೆ. ಮನೆಯೊಳ್
ನಿಂತೆ ನಾನಿಹೆ. ಗೃಹದ ಕಾರ್ಯವ
ಸಂತಸದೆ ಗೆಯ್ವಾಕೆ ಬೇಹುದು. ಗೃಹವುದಂತಾಗೆ.
ಮುಂತೆ ನೀಂ ಗಾರ್ಹಸ್ಥ್ಯಪದವಿಯ
ನಾಂತು ನಿಲು. ನಿನಗೊರ್ವ ಜಾಣೆಯ
ಮಂತಣವು ದೊರಕೊಳಲಿ ನನಗಂ ಭಾರ ನಸು ಹಗುರ.

೪೮

ಮಾತು ನಿಂದುದು. ತಲೆಯ ತಗ್ಗಿಸಿ
ಬೀತನಂದದೆ ನೋಡಿ ತನ್ನಯ
ತಾತನನು ಲೊಚಗುಟ್ಟಿ ಮೋರೆಯ ತಗ್ಗಿಸಿದ ವಾಲಿ.
ಏತಕ್ಕೆ ಮಗು ? ಪೆಣ್ಣ ಪೆತ್ತವ
ರೋತು ನಿನ್ನಯ ಮನೆಗೆ ಸುತ್ತುತ
ಸೋತು ಹೋದರು ತಕ್ಕ ಸಮಯದೆ ಮದುವೆ ಬಲ್ಲೊಗಸು

೪೯

ಎನಲು ನೋಡುವೆನೆಂದು ಕುಗ್ಗಿದ
ದನಿಯಿನೆಂದನು ವಾಲಿ. ಬೆರಲಿನ
ಕೊನೆಯ ತಿಕ್ಕುತಲೆಣಿಕೆಗೆಯ್ದನು ಪತ್ತು ಸರಿಯಾಯ್ತು.
ಮನವ ಪೇಳು. ಸುಷೇಣನಿಂದಿನ
ದಿನದೆ ತಾರೆಗೆ ವರನ ಬೇಡಿದ
ನೆನಗೆ ಸಮ್ಮತ. ನೀನುಮವಳನು ಕಂಡು ನೋಡಿರುವೆ.

೫೦

ಬೆಚ್ಚಿದನು. ದೊಡ್ಡಯನ ನೋಡಿದ
ನಿಚ್ಚೆಯಿಂದಲಿ, ತನ್ನ ಮನವನು
ಮುಚ್ಚುವಂತಿರೆ ಮೌನಮಿರ್ದನು ಚಣದ ಪರಿಯಂತ.
ಇಚ್ಚೆ ದೊಡ್ಡಯಗಂತಿರಾಗಲಿ
ಮುಚ್ಚುಮರೆಯೇನಿಲ್ಲ. ನಿನ್ನಯ
ಬೆಚ್ಚ ಗೆರೆಯನು ಮೀರೆನೆಂದನು ಗುಟ್ಟುರಟ್ಟಾಯ್ತು.

೫೧

ಬಿದ್ದಿತೆಲ್ಲರ ರೊಟ್ಟಿ ತುಪ್ಪಕೆ.
ಮುದ್ದುಗುವರನ ಹರಸಿ ಕಳುಹಿದ.
ಸಿದ್ಧವಾದುದು ಮದುವೆಯಣಿ ಜಾಂಬವನ ಮತದಂತೆ.
ಶುದ್ಧಲಗ್ನವ ನೋಡಿ ವಾಲಿಗೆ
ಮುದ್ದುಮಗಳ ಸುಷೇಣನಿತ್ತನು.
ಭದ್ರಶುಭಮಂಗಲದ ಲತೆಗಳು ಪರ್ಬೆ ದೆಸೆದೆಸೆಗೆ.

೫೨

ಮದುವೆ ವಿಸ್ತರ ದೊಡ್ಡತಾದೊಡೆ
ಮೊದಲು ತೆರೆಮರೆದೆಗೆದು ನೋಡುವ,
ವಧುವು ಪೂವಿನ ಮಾಲೆಯಿಕ್ಕುವ, ಧಾರೆನೀರೆರೆವ,
ಮದವಣಿಗ ಕೈವಿಡಿವ, ಜೊತೆಯೊಳ
ಗೊದಗುತೇಳಡಿಯಿಡುವ ಹಬ್ಬಕೆ
ಪಡೆದು ಜಾಣರೆ ನಿಂದರೆಲ್ಲರಗಾಯ್ತು ಸವಿಯೂಟ.

೫೩

ಸರಸಮದ ಸುಗ್ರೀವ ತಮ್ಮಗೆ
ಸರಿದೊರೆಯು ಪೆಣ್ಮಣಿಯನಾರಸಿ,
ಸರುವರೊಪ್ಪುವ ತೆರದಿ ಪರಿಣಯಮೆಸಗಿದನು ವಾಲಿ.
ದೊರೆಕೊಳಿಸಿ ವಿವಿಧೋಪಭೋಗವ
ಮರೆಯುದಾರಯ್ಯವನ ವಿಭವಕೆ
ಹಿರಿದು ಹಿಗ್ಗಿದ. ನೇರ ರಕುತವ ಹಂಚಿ ಹುಟ್ಟಿಹನು.

೫೪

ಒಕ್ಕಲೆನಿಸಿತು ಮನೆಯು. ಸುಕೃತವ
ನೊಕ್ಕಿ ಸವಿಗಂಡುಂಡು ತಣಿದರು.
ಚಿಕ್ಕಮಗುವಂಗದನು ತೊಡವೆನಿಸುತ್ತೆ ಕಾಣಿಸಿದ.
ಉಕ್ಕಿದುತ್ಸಹದಿಂದ ಜಾಂಬವ
ತೆಕ್ಕೆಯುಲಿ ಹಗಲಲ್ಲಿ ಶಿರದೊಳ
ಗಿಕ್ಕಿ ಮೆರೆದನು ಭಾಗ್ಯಶಾಲಿಗೆ ದೊರೆವ ಹಾಹೆಯನು.

೫೫

ಮೊಗದಿನೆನ್ನನು ಹೋಲುತಿಹನಿವ.
ನಗುವ ಕಣ್ಣನು, ಮೂಗುತುಟಿಗಳ
ಸೊಗಸ ನೋಡುವುದೆಂದು ತಾರೆಯು ನುಡಿದು ತೋರುತಿರೆ,
ಅಗಲವಾದೆದೆಭುಜದಿ ಕೈಕಾಲ್
ಸೊಗಸಿನಿಂ ತನ್ನಂತಿರೆನ್ನಲು
ಜಗಳ ನನು ಮೊಳೆಯಾದುದೀಚೆಗೆ ಗಂಡಹೆಂಡಿರೊಳು.

---

## ತೃತೀಯತರಂಗ

# ವಿಜಯ ಮತ್ತು ಸ್ನೇಹ

ಒಮ್ಮನದಿ ನಡೆಯುತ್ತೆ ರಾಜ್ಯದ
ಸೊಮ್ಮನಿವರ್ಗಡಿಯಾಗಿ ಪೆರ್ಚಿಸು
ತುಮ್ಮಹದಿ ಬಂಡಾರದುಂಬಿಸಿ, ವಾಲಿಭೂಮಿಪನ
ನೆಮ್ಮಿ ಸುಖಶಾಂತಿಗಳ ಪಡೆಯುತೆ,
ತಮ್ಮೊಳಂತಃಕಲಹಮಿಲ್ಲದೆ,
ನೆಮ್ಮದಿಯ ಬಾಳ್ಕೆಯಲಿ ತಣಿದರು ವಾನರರು ಸತತ.

೨

ದಾನವರು, ಮಾನವರ ಮುನಿಗಳು
ವಾನರೇಶನ ರಾಜ್ಯದೆಲ್ಲೆಯು
ಕಾನನದೊಳಲ್ಲಲ್ಲಿ ನೆಲಸಿದರಿದನು ಕಪಿವರರು
ವಾನರೇಂದ್ರಂಗರಿಕೆಗೆಯ್ದರು.
ಕಾನನಪ್ರಾಂತದೊಳು ಸೌಖ್ಯ
ಕ್ಷೀಣಯುಂ ಪರಕೀಯರಿಂ ಬಹ ಶಂಕೆ ಮೂಡಿದುದು.

೩

ಕರೆಯಿಸಿದ ಸನ್ಮಂತ್ರಿವರ್ಗವ
ನರಿಕೆಗೆಯ್ದನು ರಾಜಕಾರ್ಯದ
ಪರಿಯ ಪರದೇಶಿಗಳ ಗಮನಾಗಮನದಿರಿಕೆಗಳ.
ಸರುವರುಂ ಪರಿಭಾವಿಸುತ್ತದ
ನೆರೆಯನಿಗೆ ತಮತಮ್ಮ ಮತಗಳ
ನರಿಕೆಗೆಯ್ದರು. ವಾಲಿತೀರ್ಪಿಗೆ ಸರುವರೊಪ್ಪಿದರು.

೪

ಪರರ ಸುಳಿವಿಂ ರಾಜ್ಯಚಕ್ರ
ಕ್ಕರೆಯು ಸಿಲ್ಕಿದ ತೆರದೆ ದುಡುಕುಂ
ಟಿರೆಯದೊಂದನು ವನದೆ ತಪಮಂ ಗೆಯ್ವಮುನಿವರರಿಂ
ಇರದು ಬಾಧೆಯು. ಪುತ್ತ್ರಮುವದಿರು
ಸರಳರಂತೆಯೆ ನಮ್ಮ ಬಂಧುಗ
ಳಿರಿಕೆಯಾಕೃತಿಧರ್ಮಜೀವನದಿಂದ ಸರಿಸಮರು.

೫

ನೀತಿವಂತರ ಸಲ್ಗೆ ಬೇಹುದು.
ಮಾತುಕತೆಯಿಂ ಮುನಿಗಳೆಮ್ಮಂ
ಪ್ರೀತಿಸುತೆ ಸನ್ಮಾರ್ಗದೋರಿಸಿ ಕಾವರದರಿಂದೆ
ಓತು ನಡೆವುದು ಮೇಲು. ದಾನವ
ಭೀತಿಯುಂ ಪರಿಹರಿಸಿ ತಪದೊಳ್
ಶಾಂತಿಯಿಂ ನಿಲ್ವಂತೆ ನೆರವಂ ಕೊಟ್ಟು ರಕ್ಷಿಪುದು

೬

ಇನ್ನು ರಕ್ಕಸರೆನ್ನ ಧರ್ಮವ
ಮನ್ನಿಸರು. ವಾನರನರರ್ಗಳ
ಗನ್ನಗತಕಗಳಿಂದ ಕಾಡುತ್ತೆ, ಕೊಂದು ಕೂಗುವರು.
ಪನ್ನಗನ ಪಾಸಿನೊಳು ಸೇರಿಸೆ
ಬನ್ನ ತಪ್ಪಿದುದಲ್ಲ. ದೈತ್ಯರ
ಪನ್ನತಿಕೆ ಪುಗದಂತೆ ದಂಡಿಸಿ ಬುದ್ಧಿಗಲಿಸುವುದು.

೭

ದಡಿಗರಕ್ಕಸರೆನ್ನ ನಾಡಿನ
ಗಡಿಗೆ ಕಾಲಿಡದಂತೆ ದಂಡಿಸಿ,
ಕಿಡುಕರುಪಟಲ ತಟ್ಟಿದಂತಿರೆ ಎಚ್ಚರದಿನಿಹುದು.
ಕಡ್ಡಿಗೆ ಮಾಯೆಯು ಒಲದ ಮುಂದ
ಕ್ಕಡಿಯುಸಿಟ್ಟೊಡೆ, ನಾನೆ ದಂಡಿಸೆ
ನೂಡನೆ ವೈಗಾವಲಿಗೆ ಸೋದರನಿಹನು ಸುಗ್ರೀವ.

೮

ಒಡೆಯನಾಜ್ಞೆಗೆ ಮಣಿದು ಶಿರಗಳ
ಗಡಿಯ ಕಪಿನಾಯಕರು ರಕ್ಕಸ
ಗಡಣ ಕೆಡೆಗುಡದಂತೆ ಕಾವಲ ಬಲಿದು ಕಾಯ್ದಿಹರು.
ಒಡೆಯ ಗಂಧರ್ವರಿಗೆ ಗೋಲಭ
ನೆಡೆಯ ಸಹ್ಯದ ಶಿಖರ ವರದೊಳ್
ಪಡೆವೆರಸು ನಡೆತಂದು, ವಿಶ್ರಮಗೊಂಡನೊಂದು ದಿನ.

೯

ಮಳೆಯ ಜಗಿಯೊಡನಗಲೆ ಬೇಸರ,
ಬಿಳಿಯ ಮುಗಿಲೊಡನೇರೆ ಹಾಸವು,
ನಳಿನಿಯೊಡಬಿಚ್ಚುತ್ತೆ ಕಂಗಳು ನೋಡೆ ದೂರಗಳ ;
ತಿಳಿಯ ಹಸುರಿನ ನೆಲದ ಸಿರಿ ಬಾಂ
ದಳದ ನೀಲದ ಕೆಳೆಗೆ ತವಕಿಸೆ,
ಸೆಳೆದುದೆಲ್ಲರ ಮನವ ಶರದವು. ಕಾಡು ನಾಡಾಯ್ತು.

೧೦

ಎತ್ತ ಕೊರಲನು ಪಾಡಿ ಕೋಗಿಲೆ,
ಮುತ್ತ ಗಾನದಿ ಬಂಡುಣಿಯು, ಪರಿ
ಯುತ್ತೆ ತಂಪನು ಕಂಪನೀಯುತೆ ಪವನ ಗೋಲಭನ
ಚಿತ್ತರದಿನುಪಚರಿಸೆ, ಪಡೆಯೊಡ
ನತ್ತಲೇ ಕೆಲಕಾಲ ನಿಂದನು.
ಮತ್ತಭಟರಲ್ಲಲ್ಲಿ ವಿಹರಿಸಿ ತಣಿಯುತುಬ್ಬಿದರು.

೧೧

ಸಾಲು ಬೆಟ್ಟಗಳಡರಿ, ನಿರ್ಝರ
ಕೂಲದೊಳು ವಿಹರಿಸುತೆ, ನೀರೊಳು
ಕೇಲಿಗಳನಾಡುತ್ತೆ, ಫಲಪುಷ್ಪಾದಿಗಳನೆಲ್ಲ
ಲೋಲರವದಿರು ಸೂರೆಗೊಂಡರು.
ವಾಲಿಭಟರದ ಸೈಸಲಾರದೆ,
ಗೋಲಭಗೆ ಪಡೆವೆರಸು ಸರಿಯಲ್ಕೇಳಿಸಲ್ಕವನು

೧೨

ಗಿರಿವನಂಗಳು ಮರದ ಹೋರುಗ
ಳೆರೆಯರಿಲ್ಲದ ಪುರುಳು; ಪಡೆದವ
ರೆರೆಯರದರಿಂ ತಾನೆಯಧಿಪತಿ ವಾಲಿಯೆತ್ತಣವ ?
ಎರೆಯನೆಂಬುದಕಿಲ್ಲ ಬುಡ. ನೀಂ
ತೆರಳಬೇಹುದು ಬಂದ ಹಾದಿಯೊ
ಳಿರದೆ ಪೀಡಿಸಲುಗಿವೆ ನಿಮ್ಮಯ ನಾಲಗೆಯನೆಂದ.

೧೩

ಒಡನೆ ಕೈಕೈಹತ್ತಿ ಕಪಿಗಳ
ಗಡಣವನು ಗಂಧರ್ವರಾಜನು
ಜಡಿದು ಮುರಿಯಲ್ಕವರು ವಾಲಿಗೆ ಸುದ್ದಿಯರುಹಿದರು.
ಘುಡಿಘುಡಿಸಿ ನಡೆತಂದು ಕಪಿಗಳ
ಗಡಣದಿಂದೊಡಗೂಡಿ, ಗೋಲಭ
ನೊಡನೆ ಕಾಳಗವಾಡೆ ನಿಲ್ಲುತ್ತೆಂದನಾತನಿಗೆ.

೧೪

ಎಲವೊ ಗೋಲಭ, ನಮ್ಮ ನಾಡನು
ಸಲುಗೆಯಿಂ ಪುಗುತರ್ಪುದಲ್ಲವು;
ಛಲದಿನೆಲಸುವುದಲ್ಲ; ಭಂಗಮನೆಮ್ಮ ಜನಕೆಲ್ಲ
ಒಲುಮೆಯಿಂದಾಗಪುದುಮಲ್ಲವು;
ತೊಲಗಲಿಲ್ಲಿಂ ಬೇಗ ಸೌಖ್ಯವು.
ಛಲವ ತೊಟ್ಟೊಡೆ ತಲೆಯ ದಂಡವ ಕೊಳ್ವೆನೆನಲಿವನು

೧೫

ನಿಮ್ಮ ಮಂದಿಯ ಬಲ್ಲೆ. ಕೋಡಗ
ನೆಮ್ಮ ನಾಡಿನೊಳಿಲ್ಲ. ಪಿಡಿಯು
ತ್ತೆಮ್ಮ ನಾಡಿಂಗುಯ್ದು ನಿನ್ನಂ ಪಂಜರದಲಿಟ್ಟು,
ಉಮ್ಮಹದ ಪಣ್ಗಳನುಣಿಸಿ
ತ್ತೆಮ್ಮವರ ಬಿನದವನು ಪೆರ್ಚಿಪೆ.
ನಿಮ್ಮ ಪಿಡಿಯಲ್ಬಲೆಯನಿಕ್ಕುವ ಕಷ್ಟ ತಪ್ಪಿತೆನೆ

೧೬

ಸಿಲುಕಿ ನಿನ್ನಯ ಬಲೆಗೆ ನೀನೇ
ಚಲಿಪೆ ಯೆಲ್ಲಿಗೆ ? ಧರ್ಮದೇವನ
ನೆಲೆಯ ಭೋಗವನುಣ್ಬೆ. ಸಗ್ಗದಲಬಲೆಯರ ಹಿಂದೆ
ಅಲುಗಿ ತಾಳವ ಕುಣಿಸಿ ತೋಳ್ಗಳ
ಬಲವ ನುಡಿಗಳ ಕೊಂಕ ಕಲ್ತಹ.
ಸಲುಗೆಯಲ್ಲವು ಯುದ್ಧ. ಬದುಕನು ನೀಗಬೇಡೆಂದ.

೧೭

ನಾಕಿಗನ ಪೊಗಳುತ್ತ ನುಡಿದಪಿ
ವೇಕಿಗದೆಕೋ ಮೆಚ್ಚು. ಹೃದಯದೆ
ಜೋಕೆಯಿಂದಿದ ಧರಿಸುತುನ್ನತ ಪದವ ನೀಂ ಸೇರು.
ಆಕೆವಾಳತನಕ್ಕೆ ಮತ್ಸರ
ಮೇಕೆ ? ವಾಲಿಯೆ, ನಮ್ಮ ಕೈಗುಣ
ದೇಕದೇಶವ ತೋರ್ಪೆನೆನ್ನುತೆ ಸುರಿದ ಸರಳುಗಳ.

೧೮

ಸರಲ ಮಳೆಯಿಂ ವಾಲಿ ಹೆಮ್ಮರ
ಗಿರಿಯ ಶಿಖರಗಳಿಂದ, ವಾರಿಸು
ತೆರಗಿ ಗಿಡುಗನ ತೆರದೆ ಬಲ್ಗಳ ಮೂಡಿಗೆಯನಸಿಯ
ತುರಿಪದಿಂ ಪುಡಿಗೆಯ್ಯೆ, ಕೋಲ್ಗಳ
ಭರವಸೆಯು ದೂರಾಯ್ತು. ತೋಳ್ಗಳ
ಬಿರುಬನೊರೆಹಚ್ಚಲ್ಕೆ ನಿಂದನು ಗೋಲಭನು ಕೆರಳಿ.

೧೯

ಚರಿಸಿ ಹೊಯ್ದರು, ಹೊಯ್ದುಬರದರು,
ಜರದು ತಿಪಿದರು, ತಿಪಿದು ಹೊಕ್ಕರು,
ಹೊರಳಿ ನುಗ್ಗಿದರೆತ್ತಿಕುಕ್ಕಿದರುಕ್ಕೆ ಕಡುಗೋಪ.
ಮರೆಯುತೆಚ್ಚರಗೊಳುತೆ ನಿಂದರು.
ಸರಸಮದ ಹೊಯ್ದಾಟಮಮರರೆ,
ಬೆರಗನಿಂ ಕಪಿಗಡಣ ದೇವರ ನೆರಪ ನೋಡಿದುದು.

೨೦

ಅಟ್ಟಿ ಧಾವಿಪರೆಡಬಲಂಗಳ;
ದಿಟ್ಟಿಯನ್ಯವ ನೋಡಿ ನೋಡದು.
ಮುಟ್ಟಿ ಬರ್ಪರು ಬೀಳದೊರ್ವನ ನುಡಿಯು ಕಿವಿಗಳಿಗೆ.
ಮೆಟ್ಟಿ ಮೇಲ್ವಾಯ್ದೋರ್ವನೋರ್ವನ
ದಟ್ಟಿಪರು; ಪರಿಣಾಮವರಿಯರು.
ಸಿಟ್ಟಿ ಸಮರದ ಯೋಗಸಿದ್ಧಿಯು ಪಡೆಯೆ ಪೆರ್ಚಿದುದು.

೨೧

ಪಗಲು ಬೆದರಿತು, ರಾತ್ರಿಯೋಡಿತು.
ಸುಗಿಯೆ ಬೇಸಗೆ, ಮಳೆಯು ಜಾರಿತು.
ಚಿಗಿದು ಹಾಯ್ದುದು ಶರದ, ಹಿಮಶಿಶಿರಂಗಳೋಡಿದುವು.
ದಿಗಿಲು ಪುಗೆ ಪದಿನೈದು ವತ್ಸರ
ಮುಗಲಿದುವು, ಜಯಸಿದ್ಧಿಗೋಸುಗ.
ಬಗೆಯುದೊಂದನು ರಣದ ಯೋಗದೆ ಸಿಂದು ಹೋರಿದುದು.

೨೨

ವಾಲಿಗೋಲಭರಂತು ಪೋರಲ್,
ಸೋಲುಗೆಲ್ವಿನ ಪರಿಯುನಿತರರು
ತೋಲಸದಿ ತಿಳಿಯದಿರೆ, ಪದಿನಾರನೆಯ ವತ್ಸರವು
ಗೋಲಭಗೆ ನಾಕದೊಳು ಸೌಖ್ಯದ
ಮಾಲೆಯಿತ್ತುದು. ಭೂಮಿಭಾರವ
ವಾಲಿಗಂ ಗೆದ್ದವಗೆ ಪೇರ್ದುದು. ಗೆದ್ದು ಸೋತನಿವ.

೨೩

ಉಕ್ಕಿದುತ್ಸಹದಿಂದ ವಾಲಿಯು
ಹೊಕ್ಕು ಕಿಷ್ಕಿಂಧೆಯನು ಪಗೆಗಳ
ಸೊಕ್ಕಲಿಕ್ಕುತಲಿರ್ದನಿತ್ತಲು ವಿಶ್ರವಸಸುತನು,
ಸೊಕ್ಕಿ ರಾವಣನೆಂಬ ದೈತ್ಯನು
ಮಿಕ್ಕ ತಪದಿಂದೊಲಿಸಿ ಬೊಮ್ಮನ,
ಹೊಕ್ಕು ಲಂಕೆಯ ಯಕ್ಷರಾಜನ **ಪುರವ ಕೈಕೊಂಡ.**

೨೪

ಮತ್ತನಾದನು ವರದಿ. ಪುಷ್ಪಕ
ಮೆತ್ತಲುಂ ಕೊಂಡುಯ್ಯೆ, ದಿಗ್ಬಲಿ
ಯಿತ್ತು ದಿಗ್ಜಯವೆಂಬ ಪೆಸರಿಂ ನರರ ಭೂಮಿಪರ,
ಎತ್ತಲುಂ ಜಯವಾಂತು ದೇವರ
ಪತ್ತನವ ಕೈಸೂರೆಗೊಂಡನು.
ಪತ್ತುದೆಸೆಯೊಳ್ ಜನರ ಹಾಹಾರವವು ಪರ್ಬಿದುದು.

೨೫

ನಾಡಿಸರಸರ ಮೂಗ ಹರಿದೆನು
ಕೋಡಗನನಾ ವಾಲಿಯೊಬ್ಬನ
ಕಾಡಿ ಕುಕ್ಕುವೆನೆಂದು ದಶಮುಖ ವರವಿಮಾನದಲಿ
ಓಡಿ, ಕಿಷ್ಕಿಂಧೆಯಲಿ ಕಾಣದೆ.
ಕೂಡೆ ತೆಂಕಲ ಕಡಲ ತಡಿಯಲಿ
ಕಾಡಿನೊಡೆಯನನವನು ಸಂಧ್ಯೋಪಾಸ್ತಿಯಲಿ ಕಂಡ.

೨೬

ಸಾಲವೃಕ್ಷದ ನಿಲುವ, ತುಂಬಿ ವಿ
ಶಾಲವಾಗಿರ್ಪೆದೆಯು, ಲೋಹದ
ಲಾಳವುಂಡಿಗೆಯಂತೆ ದೃಢತರದೀರ್ಘಬಾಹುವಿನ,
ತಾಲದಂತಿಹ ತೊಡೆಯು, ಕಿರುಕರ
ವಾಲದಂತಿಹ ನಖದ, ಭೀಮನ
ವಾಲಿಯನು ಮರೆಯೊಳಗೆ ನೋಡಿದನೆವೆಯನಿಕ್ಕದೆಯೆ.

೨೭

ನಾಕಿಗರ ನೂರೆಹಚ್ಚಿ ನೋಡಿದೆ,
ಲೋಕಪಾಲರ ಸರಕುಗೆಯ್ದೆನು.
ಭೀಕರನನಿಂತೊರ್ವನನು ನಾಂ ಕಂಡೆನಿಲ್ಲವಹಾ !
ಆಕೆವಾಳನೆ ನಿಜವು, ಸಮರವು
ನೂಕದಿವನೊಳು. ಕಪಟವೃತ್ತಿಯೆ
ಬೇಕು ಗೆಲ್ವೊಡೆ. ಪಿಡಿವೆನೆನ್ನುತೆ ಬೆಂಗಡೆಗೆ ಬಂದ.

೨೮

ಪತ್ತು ಶಿರಗಳ ಕರ್ಗಿಸಿದನಿ
ರ್ಪತ್ತು ಕೆಯ್ಗಳ ಕೊಂಕುಗೆಯ್ದನು.
ಪತ್ತುಮೂಗಿಂದುಸಿರನಿಕ್ಕದೆ, ತೆರೆದ ಕಣ್ಣಿಂದೆ
ಚಿತ್ತಮಂ ಸ್ಥಿರಗೆಯ್ದು, ಕಾಲ್ಗಳ
ನೆತ್ತಿ ಬೆರಲಿಂ ನಡೆದು ವಾಲಿಯ
ಪತ್ತೆ ಸೇರ್ದನು ವಕ್ರವಾಮನನಾಗಿ ರಾವಣನು.

೨೯

ಸೂರಿಯನಿಗಿದಿರಾಗಿ ಬೊಗಸೆಯ
ನೀರನೆತ್ತುತೆ ನಿಂದ ವಾಲಿಯ,
ಪೇರುರವ ನಿರ್ಪತ್ತು ಕೆಯ್ಯಿಂ ಬಿಗಿದನವನೆಡದ
ತೋರತೋಳಿಂದವೃಕೆ, ಕೌಂಕುಳ
ಸೇರಿ ಕೆಯ್ಗಳು ಕರ್ಬ ಗಾಣಕೆ
ತೂರಿಸಿದ ಪರಿಯಾಯ್ತು. ಕೆನ್ನೀರ್ಪರಿಯೆ ರಸವೆನಲು.

೩೦

ಬಿಡಿಸಿಕೊಳ್ವಾಭರದಿ ಕೆಯ್ಯಿಂ
ಒದೆದು, ನಖಗಳಿನಿರಿದು, ಪದದಿಂ
ತೊಡರಿ, ದಾಡೆಯನೂರಿ, ಚೀರಿಟ್ಟಾರ್ದನಾ ದನುಜ.
ಗಿಡುಗ ನಭದೊಳ್ ಪಕ್ಕಿಯೊಂದಂ
ಪಿಡಿದು ಪಾರುವ ತೆರದಿ ವಾಲಿಯು
ನಡೆದನಂತಗೆ ಹರಸ ಶೈಲದ ರುಚಿಯು ಮರುಕಳಿಸೆ.

೩೧

ನೋಡಿ ಬೆಚ್ಚಿದನಿಲ್ಲ. ಸಂಧ್ಯೆಯ
ಮಾಡದೆಯೆ ಬಿಡಲಿಲ್ಲ. ಮನದಲಿ
ಮೂಡಲಿಲ್ಲುಬ್ಬೆಗವು. ಕಿರುಕುಳದಿಂದಲವನೆರ್ದೆ*ಯು
ಕೋಡಲಿಲ್ಲವು. ಬಿಗಿಯ ಬಲಿಯು
ತ್ತೋಡಿ, ನಾಲ್ಕುಂ ಕಡಲಿಸಿಯುಮುವ
ಮಾಡಿ, ಕಿಷ್ಕಿಂಧೆಯನು ಸೇರುತೆ, ಕಯ್ಯ ಸಡಿಲಿಸಿದ.

೩೨

ಧರೆಯನಪ್ಪುತೆ ಮುಚ್ಛೆವೋದನು.
ಕರಗಿತಂತಃಕರಣ ವಾಲಿಗೆ.
ಪರಿಜನಕೆ ಶೈತ್ಯೋಪಚಾರಂಗೆಯ್ಯೆ ಬೆಸಸಿದನು.
ಹರಿಗಳಚ್ಚರಿಗೊಂಡು ನಿಂದರು.
ಕಿರುಗುವರಸಂಗದನು ತಲೆಕಣ್
ಕರಗಳನು ಮೂರೆಂಟುನಾಲ್ಕೆಂದೆಣಿಕೆಮಾಡಿದನು.

೩೩

ಪ್ರಾಣವಾಯುವು ಸುಳಿದು ಮೆಯ್ಯೊಳ್
ತ್ರಾಣಗೂಡಿತು. ನಯನಮರಳಿತು.
ಕೋಣಪನು ನೋಡಿದನು ಬಳಸಿದ ಕಪಿಗಳೋಳಿಯನು.
ಕಾಣದೊಂದನು ಕಡೆಗೆ ಚಿಂತಿಸು
ತೂಣಯುವಸರಿದೆದ್ದು, ತಪ್ಪನು
ಮಾಣಿಸುವ ಹೊಣೆಗಾರನಿದಿರಲಿ ಕಯ್ಯ ಜೋಡಿಸಿದ.

೩೪

ಪತ್ತು ತಲೆಗಳ ಘನತೆ, ಮೋಣಿ
ರ್ಪತ್ತು ತೋಳ್ಗಳ ಬಲ್ಮೆ, ಸತ್ಯದ
ಮುತ್ತಯುನ ವರಮೆಂಬ ಮೂರುಂ ಪೆರ್ಮೆಯಿಂ ತಾನು
ಸುತ್ತಣಾಶೆಯು ಜೈಸಿ, ದೇವರ
ತೊತ್ತುಗೆಯ್ದೆನು. ನಿನ್ನ ಹೋಲುವ
ಶಕ್ತನೊರ್ವನ ಕಾಣದಾದೆನು. ತಪ್ಪ ಮನ್ನಿಪುದು.

೩೫

ಈಶನೊರ್ವನ ಕಂಡೆನಾಗ. ಕ
ಪೀಶನೋರ್ವನನೀಗ. ಭುಜಬಲ
ಮೀಸಲಾದುದು ನಿಮಗೆ. ಕಪಟವ ತೋರ್ದೆ ನಾಂ ದಿಟವು.
ಬೇಸರಂಗೊಳಬೇಡ. ಕೆಳೆತನ
ದಾಸೆಯಿಂ ಕೈಚಾಚಿ ನಿಂದಿಹೆ.
ಸಾಸಿ ಪಿಡಿ ನೊಂದಿರ್ಪ ಕಯ್ಗಳನಮೃತಹಸ್ತದಲಿ.

೩೬

ದಾನವರ ಕುಲದಲ್ಲಿ ತಡಕಲು
ಮಾನನಿಧಿ ನೀನೋರ್ವನಹುದೈ.
ಜಾಣತನದಿಂ ಕಿಲುಬನೊರಸುತಲೊಪ್ಪವಿಕ್ಕಿರುವೆ.
ನಾನು ತಾನೆಂದೆಂಬ ಭೇದವು
ಹೀನವಾದುದು. ಮಿತ್ರನೆಂಬಭಿ
ಮಾನ ಮೊಳೆದುದು. ವಹ್ನಿ ಸಾಕ್ಷಿಗೆ ನಿಲಲಿ ಕೆಳೆಗೆಂದ.

೩೭

ಬೆಳಗಿದನು ದೆಸೆದೆಸೆಯ ವಹ್ನಿಯು.
ಬಳಸಿದರು ಬಳಿಕೀರ್ವರವನನು.
ಕೆಳಗೆ ಕೈಕ್ಕೈ ನೀಡಿ ಗಾಢಾಲಿಂಗನಂಗೆಯ್ದು,
ಅಳಿಯೆ ಕೀಳ್ಮೇಲೆಂಬ ಭಾವವು,
ಸುಳಿದು ಪಲವಡಿಗಳನು, ತಮ್ಮಯ
ಕೆಳೆಗೆ ಕಡುಪಂ ಬಲಿದು ನಿಂದರು ವಾಲಿದಶಮುಖರು.

## ಚತುರ್ಥತರಂಗ

# ಶಾಪ ಮತ್ತು ಅಂತಃಕಲಹ

ಅಕ್ಕರಿಂ ರಾವಣನು ನೇಹದ
ಸಕ್ಕರೆಯು ಸವಿಗಂಡು ತೆರಳಿದ
ಸುಕ್ಕಿದುತ್ಸಹದಿಂದಲಿರಲಿವನತ್ತ ಮಯಸುತನು
ಸೊಕ್ಕಿ ದುಂದುಭಿಯೆಂಬ ದೈತ್ಯನು
ತಕ್ಕವನನಿದಿರಾಳನರಸುತೆ,
ಪೊಕ್ಕು ನೀರಧಿನಾಥಶಿಬಿರವ ಕಾಳಗಕೆ ಕರೆದ.

೨

ದುರುಳನೀತಗೆ ತಕ್ಕ ಧೂರ್ತನ
ನರಸಿ ತೋಳಿಸ ತೀಂಟೆಗಳೆವೆನು.
ಸರಿಸಮದೆ ನಿಂದಿವಗೆ ಕಾಳಗಗುಡುವ ಮನವಿಲ್ಲ.
ತೆರಳಲಿವನೆಂದೆನುತೆ, ವಾರಿಧಿ
ಯ:ರಸ ಮನ್ನಿಸಿ, ಜಡರು ನಾಂಗಳು ;
ದೊರೆಯುಹನು ಹಿಮವಂತ ಸಾರದೆ ಬಿಜಯುಗೆಯ್ವುದೆನೆ.

೩

ಅಂಬುಧಿಯು ಬೀಳ್ಕೊಂಡು ನಡೆಯು
ತ್ತಂಬರವ ಮೊಳಗಿಂದ ಪದದಿಂ
ಕುಂಭಿನಿಯು ಭೇದಿಸುತೆ ಪೊಕ್ಕನು ಶೈಲರಾಜನನು.
ತುಂಬುಕೆಯ್ಗಳಿನೆತ್ತಿ ಶಿಖರವ
ನಂಬುಧಿಗೆ ಬಿಸುಡುತ್ತೆ, ಕೋಪಾ
ಡಂಬರದಿ ಕಾಳಗಕೆ ಕೂಗಿದನದ್ರಿರಾಜನನು.

೪

ಮತ್ತ ದನುಜಗೆ ಬಾಹುಯುದ್ಧವು
ನಿತ್ತು ಪಡೆಯುವ ಪದವಿಯೇವುದೊ !
ಕುತ್ತವಿದ ಪರಿಹರಿಸಿಕೊಳ್ಳುವುದೆ ಮೇಲು ತನಗೆಂದು,
ಹತ್ತಿರಕೆ ಕರೆದವನ, ದುಂದುಭಿ,
ಮುತ್ತನೆನ್ನೊಳ್ ಸರಸನೋಕ್ತೈ ?
ಇತ್ತ ನಿನ್ನಯ ನೆಲೆಗೆ ಸೊಗಸಿನ ತಾಣಗಳನೀವೆ.

೫

ಬಲ್ಲಿದನು ನೀನಹುದು. ವಾಲಿಯು
ಭುಲ್ಲವಣೆ ಬಿರುಸಾಯ್ತು. ನೀನಿರ
ಲಿಲ್ಲಿ ತನಗಂ ನೆರವು. ಮುಂಗನ ಕಾಟ ತಪ್ಪುವುದು.
ಇಲ್ಲೆ ನೀಂ ನೆಲಸೆನಲು, ವಾಲಿಯು
ಸೊಲ್ಲನಡಗಿಸುವನ್ನೆವರೆಗಂ
ನಿಲ್ಲೆನಲ್ಲಿಯುವೆುಂದು ಕಿಷ್ಕಿಂಧೆಯನು ಸೇರಿದನು.

೬

ಜೀವರಾಶಿಗಳೆಲ್ಲ ನಿದ್ರಾ
ದೇವಿಯುರ ಮಡಿಲಲ್ಲಿ ತಮ್ಮಯ
ನೋವನೆಲ್ಲವ ಮರೆದು. ಶಾಂತಿಯ ಪರಮಸೀಮೆಯೊಳು
ತಾವೆ ತಾವಾಗಿರುತೆ, ರಜನೀ
ದೇವಿಯುರ ಮೌನಕ್ಕೆ ಘನತೆಯ
ನೀವ ಪೊಡಮಟ್ಟಿರೆ, ನಿಶೀಥೆಯ ಸಮಯದಲಿ ದನುಜ,

೭

ತೋರಣವನಡಗಟ್ಟಿ, ಖುರದಿಂ
ಧಾರಿಣಿಯನಪ್ಪಳಿಸಿ, ಶೃಂಗದ
ಕೂರಿತಹ ಕೊನೆಯಿಂದ ಕದಗಳ ಸೀಳ್ದು ಕೆಡಪುತ್ತೆ,
ತಾರರವದಿಂದಾರ್ದು, ಮೌನವ
ಸೂರೆಗೊಂಡನು ದುಂದುಭಿಯು. ಹೌ
ಹಾರಿ ಕಪಿಕುಲ ನಿದ್ರೆಯಿಂದೆಳ್ಚೆತ್ತು ಗಜಬಜಿಸೆ.

೮

ಸದ್ದು ಹಬ್ಬಿತು. ವಾನರಾಧಿಪ
ನಿದ್ದೆಯಿಂದೆಚ್ಚೆತ್ತನಾಕ್ಷಣ.
ಸುದ್ದಿಯೇನೆಂದರಿಯಲಂತಃಪುರವ ಹೊರವಂಟ.
ಹೊದ್ದಿ ಕುತುಕವ ರಾಣಿವಾಸದ
ಲಿದ್ದ ಪರಿಜನ ತಾರೆಯೊಡಬರ
ಲುದ್ಧತನ ದುಂದುಭಿಯು ಸಮರೋತ್ಸಾಹವನು ಕಂಡ.

೯

ಪೂವ ಸರಲನು ಬಿಟ್ಟು ಬಂದೈ
ಕಾವರಾಯನೆ ! ಪೆಣ್ಣ ಪಡೆ ಬೆಂ
ಗಾವಲಿಗೆ ನಡೆತಂದುಮಿರ್ಪುದು. ನಿಮ್ಮ ಬಲ್ಮೆಯನು
ನಾವು ಕಂಡೆವು. ನಿಮ್ಮ ಪಡೆಗಿಂ
ದಾವು ಜಯವಧುವೀವೆವಂತಿರ
ಲಾವನಿದಿರಲಿ ನಿಲ್ವ ? ಸೋಜಿಗದಾಳ ಕಂಡೆನಲೇ !

೧೦

ಮಹಿಷರಾಜನ ಮನ್ನಣೆಯ ನಾಂ
ವಿಹಿತವಾಗಿಯೆ ಗೆಯ್ದು ಕಳುಹುವೆ
ನಿಹಗೆ. ನಿನ್ನಯ ಗುಣಕೆ ಸರಿದೊರೆಯುಪ್ಪಪಟ್ಟದಲಿ
ವಿಹರಿಸಲು ನೆರವಿತ್ತು, ನಾಂಗಳು
ಸಹಕರಿಸಿ ಕಳುಹುವೆವು. ನೀಂಗಳು
ಬಹುದನೇ ಹಾರೈಸಿ ಜವಹುರದಲ್ಲಿ ನಿಮ್ಮವನು

೧೧

ಉಂಡು ದಂಡದ ರುಚಿಯ, ಜವನನು
ಕೊಂಡು ಬೆನ್ನೊಳು ಭರದ ಸವಿಯನು,
ಕಂಡಕಂಡೆಡೆಗೆಲ್ಲ ಧಾವಿಸಿ ನೋಟಗಳ ಸೊಂಪ
ಉಂಡು ಯುಗಯುಗದಲ್ಲಿ, ಪಟ್ಟವ
ಚಂಡ ನಿನಗರ್ಪಿಸಲು ಕಾಯ್ದಿಹ.
ಕೊಂಡದನು ದಾಯಿಗನ ಬಯಕೆಯ ಸಲಿಸಿ ಸುಖಿಸೆನಲು,

೧೨

ನಿದ್ದೆಗಣ್ಣೆನಲೆದ್ದು ಬಂದಿಹೆ.
ಬದ್ಧವಿಲ್ಲದೆ ನುಡಿವೆ. ಸತಿಯೊಡ
ನಿದ್ದ ರಾತ್ರಿಯ ನೂಕು. ಬೆಳಗಿಸಲಾಕೆಯುರು ಕಳುಹೆ,
ಯುದ್ಧಗೆಯ್ಯಲ್ ನಿಲ್ವೆ. ಗಂಡಾ
ಗಿದ್ದರಂದೇ ಬರ್ಪುದಲ್ಲದೆ,
ದೊಡ್ಡಗನ ಪರಿಯಾಗಿ ಬದುಕಿರು. ಸಾಗುವೆನು ಮುಂದೆ.

೧೩

ಸತ್ತು ಸೇರುವೆನೆಂಬ ಮೂರ್ಖನಿ
ಗಿತ್ತು ಮದ್ದನು ಫಲವದೇವುದೊ !
ಹೊತ್ತು ಮೂಡುವ ಮುನ್ನ ಭಾಷೆಯ ಸಲಿಸು ನೀನೆಂದು
ಅತ್ತ ಸರಿದಳು ತಾರೆ. ದುಂದುಭಿ
ಯಿತ್ತ ವೈಮಲೆಯುತ್ತೆ, ವಾಲಿಯು
ಕುತ್ತಿ ಕೊಲ್ಲುವೆನೆಂದು ಭರದಿಂ ನುಗ್ಗಿದನು ಮುಂದೆ.

೧೪

ಕಾಡಿ ಕಣ್ಣುಗಳಿಂದ ಚುರ್ಚುತ
ಲೇಡಿಸುತೆ ಬಾಯಿಂದಲುಸಿರಿಂ
ತೀಡಿ ಬೆವರಿಸಿ, ತೂಗಿ ಲೋಮಶಲಾಕೆಗಳ ಸುಳಿಸಿ,
ಪೀಡಿಸುತಲಡಗಿರ್ದ ಕೋಪವ
ಕೂಡೆ ಹೊರಹೊಮ್ಮಿಸಿದರೀರ್ವರು.
ನಾಡವೈರಿಯದಲ್ಲ ; ಬಗ್ಗದು ಕಿರಿಯ ಸಾಧನಕೆ.

೧೫

ಗಿರಿಯ ಶಿಖರಗಳೆಲ್ಲ ಸವೆದುವು.
ಮರವನೆಲ್ಲವ ನುಚ್ಚುಗೆಯ್ದರು.
ಸರಿಸಮದ ಹೊಯ್ದಾಟವಾದುದು. ಸೋಲಲಿಲ್ಲವರು.
ಕಿರಿಯಸಾಧನಮಾತ್ಮಜಯಮಂ
ದೊರಕಿಸದು ; ಮೇಣಾತ್ಮಬಲವೇ
ಪಿರಿಯ ಸಾಧನವೆಂದು ಹೊಯ್ದರು ತಮ್ಮ ಬಾಹುಗಳ.

೧೬

ನುಗ್ಗಿ ಹೊಯ್ದರು. ವಜ್ರಮುಷ್ಟಿಗೆ
ಹಿಗ್ಗಿ ಹೂಂಕರಿಸಿದರು; ತಿವಿದರು.
ಸಗ್ಗದೀರ್ವರು ಮಲ್ಲಗಾಳಗವಾಡಿದರು. ಕಡೆಗೆ
ತಗ್ಗಿದನು ದುಂದುಭಿಯು. ವಾಲಿಯು
ವೆಗ್ಗಳಿಸಿ ಪಿಡಿದೆತ್ತಿ ಕುಕ್ಕಲ್,
ಬುಗ್ಗೆ ರಕುತದ ಚಿಮ್ಮಿತಸುರನ ವದನನಾಸಿಕಡೆ.

೧೭

ಗಿಡುಗನಂತಿರಲೆರಗಿ, ಕಯ್ಯಿಂ
ಬಡಿದು, ಪದದಿಂದೊದೆದು ಮರ್ದಿಸಿ,
ತಡೆಯುದೆತ್ತುತೆ ಕುಕ್ಕಿ, ತೋಳಿಂ ತೂಗಿ ದುಂದುಭಿಯ
ಒಡಲನೆಸೆದನು. ರಕ್ತಬಿಂದುಗ
ಳೊಡವೆರೆದು ಗಾಳಿಯಲಿ, ಮುನಿಗ
ಳ್ಗೊಡೆಯನಾದ ಮತಂಗನಾಶ್ರಮದೊಳಗೆ ಸೂಸಿದುವು.

೧೮

ಮೂಗುದುದಿಯೊಳು ಮುನಿಸು ಮುನಿಗ
ಳ್ಗಾಗು ಹೋಗನು ಲೆಕ್ಕಿಸದೆ ಮುಸಿ,
ರೇಗಿ ಶಾಪಮನಿತ್ತ ತನ್ನಾಶ್ರಮದ ಸರಿಸದಲಿ
ಏಗಳುಂ ವಾಸವನ ಸೂನುವು
ಸಾಗಿಬರಲಂತವನ ಮಿತ್ರರು
ನೀಗಿಕೊಳ್ಳುವರಸುವನೆನ್ನುತೆ ಕೋಪದಿಂದವನ.

೧೯

ದನುಜವಂಶಕುಠಾರನೆನ್ನುವ,
ಘನತೆಸುಜನತೆಯುಳ್ಳನೆನ್ನುವ,
ವನದ ರಾಜ್ಯಕ್ಕೊಡೆಯನೆನ್ನುವ, ಯುವಕನೆಂದೆಂಬ,
ಕನಲಿ ಯುದ್ಧದ ಮರವೆಯಿಂದಿದ
ನೆನೆದನೆನ್ನುವ ಘನತೆ ಹಿಂಗಿತು.
ಮುನಿಯು ಗಳಿಸಿದುದಲ್ಲ ಕೋಪವೆ ದಿಟವು ಶಮವಲ್ಲ.

೨೦

ವಿಜಯದುತ್ಸಾಹದಿಂದ ವಾಲಿಯು
ಬಿಜಯಗೆಯ್ದನು. ಕಪಿಕುಲಂಗಳ
ವಿಜಯಜಯರವ ಪರ್ಬಿ ಮೊಳಗಿಸಿತೆಲ್ಲ ದೆಸೆಗಳನು.
ವಿಜಯದುತ್ಸಾಹದೊಡನೆ ಶಾಪದ
ಗಜಬಜಿಕೆಯಲ್ಲಲ್ಲೆ ಮಡಲಿಡೆ
ಸುಜನರೆದೆ ಪಾರಿದುದು. ವಾಲಿಗೆ ಕೇಳಿಸಿದರದನು.

೨೧

ಧರ್ಮಸಿಧಿಗಳು ; ಲೌಕಿಕಂಗಳ
ಮರ್ಮವನು ಬಲ್ಲವರು ; ದೀನನ
ಶರ್ಮವನು ಕಾಯ್ವವರು ; ಕಾಣದೆ ಗೆಯ್ದ ಕಾರಿಯದ
ಮರ್ಮವನು ತಿಳುಹುವೆನು ; ಮುನಿಗಳ
ಕೂರ್ಮೆಗಳಿಸುವೆನೆನುತಲಾತನ
ಪೆರ್ಮೆಯನೆ ಪರಿಭಾಷಿಸುತ್ತಲಿ ಬಿನ್ನಪಂಗೆಯ್ದ.

೨೨

ಶುದ್ಧಚರಿತನೆ ತಪ್ಪ ಮನ್ನಿಸು.
ಯುದ್ಧರಾಗದಿನಾಯ್ತು. ತನ್ನೊಳ
ಗುದ್ದುರುಟುತನವಿಲ್ಲ. ಮುನಿಗಳೆ ನಮ್ಮ ಕುಲದೈವ,
ಮುಗ್ಧನಾದೆನು. ಸಲಹು, ಕೃಪೆಯಿಂ
ದುದ್ಧರಿಸು, ಸಲಹೆಂದು ವಾಲಿಯು
ಬಿದ್ದು ಹೊರಳಿದನಾತನಡಿಯೊಳು ದೀನನಾಗುತ್ತೆ

೨೩

ಕಲ್ಲು ಕರಗಿತು ದೀನವಾಣಿಗೆ.
ಹುಲ್ಲು ತಲೆದೂಗಿತ್ತು ಭಕ್ತಿಗೆ.
ಹುಲ್ಲೆಹುಲಿ ಕಣ್ಣೀರನಿಟ್ಟುವು ಮರವೆಯಂ ತಿಳಿದು.
ಕಲ್ಲಿಗುಂ ಕಲ್ಲಾಗಿ ಮುನಿಪನು
ನಿಲ್ಲದಲ್ಲಿಂ ಪೊರಟು, ತನ್ನಯ
ಪುಲ್ಲಮನೆಯಂ ಪೊಕ್ಕನೀತನ ತಪ್ಪ ಮನ್ನಿಸನು.

೨೪

ಶಾಪದಿಂದವನೊಂದನಿಲ್ಲ. ಪಿ
ಶಾಸಗುಡದಿರೆ ಬೆಂದನಿಲ್ಲವು.
ತಾಪಸಂ ತಾನಾಗಿ ಶಮೆಯುಂತಳೆಯದಾ ಮುನಿಯು
ಕೋಪದಿಂದೊಳಪೊಕ್ಕನೆಂಬಾ
ತಾಪದಿಂದವ ನೊಂದು ಬೆಂದನು.
ಕಾಪುರಷನಂದದಲಿ ವಾಲಿಯು ಸರಿದನಲ್ಲಿಂದ.

೨೫

ದುಂದುಭಿಯ ಸಂಹಾರ, ರಕ್ತದ
ಬಿಂದುಗಳ ಪಸರಣೆಯು, ಮುನಿ ಮುನಿ
ಸಿಂದಲಿತ್ತುದು ಶಾಪ, ದೈಸ್ಯಕೆ ಬಂದ ವಿಷಮಫಲ
ಒಂದಿ ನೆನಪಿಗೆ ಬರಲು, ವಾಲಿಯು
ಮಂದನಾಗುವ ; ಕಠಿನನಾಗುವ.
ಕಂದು ಹೊಕ್ಕುದು ಮನಮನೇಳ್ಗೆಗೆ ತೊಡಕು ನೂರಾರು.

೨೬

ಅಳಿದ ದುಂದುಭಿಯೆಂಬ ಸುದ್ದಿಯು
ಘಳಿಲನಾವರಿಸಿದುದು. ದನುಜರು
ತಳೆದು ದುಃಖವನರುಪಿದರು ಮಾಯಾವಿಗೀ ಹದನ.
ಕಲಕಿ ಕಪಿವಾರಿಧಿಯ, ವಾಲಿಯ
ನೆಳೆದು ಮರ್ದಿಸಿ ತಣಿವೆನೆನ್ನುತೆ,
ಛಲವ ತೊಟ್ಟನು ಮಯನ ಪುತ್ರನು. ಸಹಜನಿವನಲ್ತೇ !

೨೭

ಮಗನ ಸಾವಿಂದೆಮ್ಮ ತಂದೆಯ
ಬಗೆಯು ಬೇಗುದಿಗೊಂಡು ಸೊರಗಿತು ;
ವಿಗಡ ಸೋದರನಳಿವು ಮನಮಂ ಕುಕ್ಕಿ ಕೊರೆಯುತಿದೆ.
ಅಗಡು ವಾಲಿಯ ಬಿಲಕೆ ಸೆಳೆವೆನು.
ಬಗೆದು ಹಸಿಬಿಸಿರಕ್ತಮಾಂಸವ
ತೆಗೆದು, ಕೋಪಾನಲಗೆ ಶಾಂತಿಯನಾಗಿಸದೆ ಬಿಡೆನು.

೨೮

ರಕ್ಕಸರ ವಂಶಕ್ಕೆ ವಾಲಿಯು
ಕುಕ್ಕುಮುಳ್ಳಾಗಿಹನು. ಕಪಿಗಳ
ಸೊಕ್ಕು ಬಲಿಯಿತು. ನಮ್ಮ ಕಂಡರೆ ಕಕ್ಕುವರು ವಿಷವ.
ತಿಕ್ಕಿ ಮುಕ್ಕುವೆನವನ. ಕಪಿಗಳ
ನೊಕ್ಕಲಿಕ್ಕುವೆ. ನಮ್ಮ ಸಂತತಿ
ಗುಕ್ಕಿಸುವೆ ಸಂತಸವನೆನ್ನುತೆ ಪೊರಟ ಮಾಯಾವಿ.

೨೯

ಎಲ್ಲಿ ಕೋಡಗನವನು ? ಸಹಜನ
ನಿಲ್ಲಿ ಮೋಸದೆ ಕೊಂಡ ಮರ್ಕಟ
ನೆಲ್ಲಿಹನು ? ಮಾಯಾವಿ ಬಂದಿಹೆನವನನೊರಸಲ್ಕೆ.
ತಲ್ಲಿಯನು ಸೀಳುವೆನೆನುತ್ತಲಿ
ಭುಲ್ಲವಿಸಿ, ಕಿಷ್ಕಿಂಧೆಯೊಳಗಣ
ಮಲ್ಲರಿಗೆ ನಟ್ಟಿರುಳು ನಿದ್ದೆಯ ಭಂಗಿಸಲ್ಕವನು.

೩೦

ಖೂಳರಕ್ಕಸರಿನ್ನು ಮಿರ್ಪರೆ !
ಕಾಲಪಾಶದ ಕುಣಿಕೆ ಕೊರಲಲಿ
ಬೀಳೆ ಬಂದಿಹನಿಲ್ಲಿ. ಮರ್ದಿಸುತವನ ವಂಶವನು
ಕಾಲನೆಂಬವ ಬೇರೆಯಿಲ್ಲವು,
ವಾಲಿಯೇ ದಿಟವೆಂದು ತೋರ್ಪೆನು.
ಸೀಳ್ವೆನೆಂದವನೆಯ್ದೆ, ಬೆಂಗಡೆ ನಡೆದ ಸುಗ್ರೀವ.

೩೧

ಘುಡಿಘುಡಿಸಿ ಸೋದರರು ನೆಲ
ಧಡಧಡಿಸೆ ನಡೆತರಲು, ರಕ್ಕಸ
ನಡಿಗಡಿಗೆ ಸೋಡಿದನು. ಮೃತ್ಯುವೆ ರೂಪವೊರಡಾಂತು,
ಬಡಿಯಲೈತಂದಿಹುದು ; ತಡೆಯು
ಲ್ಕೆಡುವೆನೆಂದೆನುತವನು ಧಾವಿಸೆ,
ತಡೆಯದೀರ್ವರು ಬೆನ್ನಬಿಡದಲೆ ಸಾಗಿದರು ಮುಂದೆ.

೩೨

ದಾರಿದಪ್ಪಿಸಿ, ಹೊದರುಮರೆಯಲಿ
ಸಾರಿ ದೂರಕೆ ಪರಿದು, ಮುರಿಮುರಿ
ದೋರೆಗಣ್ಣನು ಸುಳಿಸಿ, ನಡುಗುತಲೆಡವಿ ಚೀರುತ್ತೆ,
ಪಾರುವಸುವನು ಪಿಡಿದು ಕಯ್ಯೊಳು
ಹೋರ ಹೊಕ್ಕನು. ಬೀಸುದೊಣ್ಣೆಯು
ಜಾರೆ, ಸಾಸಿರಬರಸದಾಯಿ-ಸವೆಂಬುದನು ಬಲ್ಲ.

೩೩

ಪೊಕ್ಕು ಬಲವನು ದನುಜನನು ಮುರ
ದಿಕ್ಕಿ ಬರ್ಪನು ತಮ್ಮ, ಹೋರಿನ
ಪಕ್ಕದಲಿ ನೀನಿದ್ದು ಪಗೆಗಳ್ ಸುಳಿಯೆ ಕೊಲ್ಲುದೆನೆ,
ಪೊಕ್ಕನಿಕ್ಕಯನವನು ಭಯದಿಂ
ದಿಕ್ಕುವುದುಮು ತಮುಲ್ಲ ದೇವನೆ,
ಇಕ್ಕುವುದು ಪಜ್ಜೆಯನು ಪಿಂದಕೆ ಲೇಸೆನಿಕ್ಕವನು,

೩೪

ಹೂಡಿ ಮಾಯೆಯ ನಮ್ಮನೆಲ್ಲರ
ಖೋಡಿಗಳೆಯುವರಲ್ಲದಪದಿರು
ಮೂಢರಲ್ಲವು. ತನ್ನ ಬರವಂ ಕಾಯ್ದು ನಿಂದಿಹುದು.
ಹೇಡಿಗಳ ಸಲ್ಲಾಪ ಕೂಡದು.
ಕೇಡು ತಪ್ಪದು ದೈತ್ಯಕುಲದಿಂ.
ಮಾಡಸಲ್ಲದುಪೇಕ್ಷೆಯೆನುತಲಿ ಪೊಕ್ಕನಾಬಿಲವ.

೩೫

ನಿಂದನೀತನು ಹೊರಗೆ ನೇಮುವ
ನೊಂದೆ ಮನದಿಂ ತಳೆದು ಶಿರದೊಳು,
ಸಂದು ದಿನಗಳು ತಿಂಗಳಾದುವು ಸುದ್ದಿಯಿನಿತಿಲ್ಲ.
ಬಂದನಿಲ್ಲಣ್ಣಯನು ಬೇಗದೆ.
ಕಂದು ಮಸಗಿತು ಮನವನಾತನ
ಹಿಂದಿನಾಪರಿ ಮನಕೆ ಬರೆ, ನಸು ಧೈರ್ಯ ಮಿಡುಕಿದುದು.

೩೬

ಕಳೆಯೆ ದಿನಗಳ್ ಶಂಕೆನೆಸರಿಂ
ಮೊಳೆತು, ತಿಂಗಳ್ ಪರಿಯೆ ದಿಗಲಿನ
ಒಳಕೆಯಿಂ ಮರನಾಗಿ, ಕಡೆಯೊಳ್ ಭಯದ ಲತೆಯಾಗಿ,
ಬಳಸಿತಚಲಂ ಮನಮದೀತನ.
ತಿಳಿಯದಾದುವು ದಿಕ್ಕುದೆಸೆಗಳು.
ಬಳಕೆಗಂ ಮಾರಿರ್ಪ ದೋಹದ ಕಾರ್ಯವೆಂದು ದಿಟವು.

೩೭

ಒಂದು ಬರಿಸಂ ನೂಕುತಿರ್ದುದು ;
ಬಂದನಿಲ್ಲಣ್ಣಯನು. ದೈತ್ಯರ
ವೃಂದದಬ್ಬರ ಪೆರ್ಚಿತಣ್ಣನ ಸದ್ದು ಕೇಳಿಸದು
ನಿಂದು ನೋಡುತ್ತಿರಲು, ರುಧಿರವು
ಬಂದು ಹೆದ್ದೊರೆವರಿಯೆ ಬಿಲದಿಂ
ಹಿಂದುಮುಂದನು ತಿಳಿಯದಾದನು ಮರಣಭೀತಿಯಲಿ.

೩೮

ಅಣ್ಣನುಳಿವಿನ್ನೆಲ್ಲಿ ? ದೈತ್ಯರು
ಮಣ್ಣುಗೂಡಿಸದಿರರು ತನ್ನನು.
ನುಣ್ಣನಿಲ್ಲಿಂ ಸರಿವೆನಾದೊಡೆ ಕಂಡರುಳಿವಿಲ್ಲ.
ಮುನ್ನ ಬಂಡೆಯ ಬಲಿದು ಹೋರಿಗೆ
ಕುನ್ನಿಗಳ ಮರ್ದಿಸುತಲೋಡುವೆ
ನೆನ್ನುತಲಿ ಬಂಡೆಯನು ಬಲಿದನು ಚಿಗಿದನಲ್ಲಿಂದ.

೩೯

ಕೆಟ್ಟಸುದ್ದಿಯ ಕೇಳ್ದು ತಾಪಕೆ
ಪಟ್ಟಣವೆ ಗುರಿಯಾಯ್ತು. ವಾಲಿಗೆ
ಕೊಟ್ಟರುದಕಾಂಜಲಿಯನೊಡಬಡಿಸುತ್ತೆ ತಮ್ಮನನು.
ಇಷ್ಟರೆಲ್ಲರು ನೆರೆದು ರಾಜ್ಯದ
ಪಟ್ಟವನು ತಳೆವಂತೆ ಪೇಳ್ದರು.
ಪಟ್ಟವಣೆಯಲಿ ನೆಲಸಿ ದಿನಗಳ ನೂಕಿದನು ಹಲವ.

೪೦

ಇತ್ತ ಮಾಯಾವಿಯನು ದೈತ್ಯರ
ನೊತ್ತವನು ಕೊಂದಿಕ್ಕಿ ಸವೆಯಿಸಿ,
ತೆತ್ತಿಗನ ಕಾಣಲ್ಕೆ ಬಂದನು ಬಿಲದ ಬಾಗಿಲಿಗೆ.
ಎತ್ತಲಾಗದ ಕಲ್ಲ ಬಲಿದಿರೆ
ಚಿತ್ತಸಂಚಲವಾಯ್ತು. ಕಲ್ಲನು
ಕಿತ್ತೆಸೆದು ತಮ್ಮನನು ಕಾಣದೆ ನಿಂದು ಚಿಂತಿಸಿದ.

೪೧

ಆರ ಕೃತ್ಯವೊ! ತಮ್ಮನನು ಕೈ
ಸೂರೆಗೊಂಡರೊ! ಬಿಲಕೆ ಕಲ್ಲನು
ತೂರಿಸಿದ ಮಾಯೆಗನೆ ತಮ್ಮನ ಮೃತ್ಯುವಂತಿರದೆ,
ಘೋರ ಸುತ್ರ್ಯಣ ಪಾದಚಿಹ್ನೆಯು
ಮಾರಿ ತಮ್ಮಯನೆಂದು ಪೇಳ್ವುದು.
ಸೇರುತೂರನು ಪಗೆಯು ನಿರ್ಧರಗೆಯ್ದು ದಂಡಿಪೆನು.

೪೨

ಮನದ ಚಿಂತೆಗೆ ನೆಲೆಯು ಸಿಲ್ಕಿತು,
ವನಮನಾಗಳೆ ಪದವು ದಾಂಟಿತು
ವನಚರಾಧಿಪ ಸುಳಿದನೊಡ್ಡಿದ ರಾಜಸಭೆಯೊಳಗೆ.
ಅನುಜನೋಲಗಗೊಟ್ಟು, ಸಿಂಹಾ
ಸನದಿ ಕುಳ್ಳಿರೆ ಕಂಡನಾಕ್ಷಣ
ಕನಲಿಕೆಯು ಹುರಿಯೇರಿತುಂಗುಟದಿಂದ ತೆಲೆತನಕ.

೪೩

ನೋಡಿ ಹೂಂಕೃತಿಗೆಯ್ದ ವಾಲಿಯು.
ಮೂಡದೊಂದುಂ ನುಡಿಯು ಬಾಯೊಳು.
ಕೋಡಿ ಕಪಿಗಳು ಕಯ್ಯ ಶಿರದೊಳಗಿಕ್ಕಿ ಬಾಗಿದರು.
ನೋಡಿದನು ಸುಗ್ರೀವನಣ್ಣನ.
ಬಾಡಿ ಪೋದುದು ಮೊಗವು. ಕೊರಗುತ
ಕೂಡೆ ಬಿದ್ದನು ಪಟ್ಟವಣೆಯಿಂ ನಡುಗಿ ಮರವಟ್ಟು.

೪೪

ವಾಲಿಯಿದಿರೊಳು ನಿಂದು ಕೋಪದ
ವೇಲೆಯನು ತಡೆಗಟ್ಟಿ ಶಾಂತಿಯ
ನೋಲಗಿಸುವಾತಗಳೆ ದೊರೆಯರು. ಕಡೆಗೆ ಕಪಿವರರು
ನೀಲತಾರರು ನಲನು ಹನುಮನು
ತಾಳ್ದು ಧೈರ್ಯವ ತಿಳುಹಿ ತಮ್ಮನ,
ವಾಲಿಯಿದಿರಲಿ ನಿಲಿಸಿ, ಬೇಡಲ್ ಕ್ಷಮೆಯ ನಿಯಮಿಸಲು,

೪೫

ಅಡಿಗಡಿಗೆ ವಂದಿಸುತ ಪಾದಕೆ,
ಕಡಲಿಡುವ ಕಣ್ಣೀರ ಸೂಸುತೆ,
ಮುಡಿಗೆ ಸೇರಿಸ ಪಾದಧೂಳಿಯ ತೊದಲುವಾತಿನಲಿ
ಜಡನು ನಾನಹುದಣ್ಣ. ನರೆನಿ
ಮ್ಮಡಿಗೆ ತಪ್ಪಿದೆ. ದನುಜಭಯದಿಂ
ದೊಡಲ ರಕ್ಷಿಸೆ ಒಲಿದೆ ಶಿಲೆಯನು. ಪರಿದೆ ಪಂದೆಯೊಲು.

೪೬

ರಾಜ್ಯಭಾರದ ಬಯಕೆ, ಪದವಿಯು
ಸೋಜಿಗದ ಸೊಗದಿಚ್ಛೆ, ಸತ್ತ್ವವ
ಮಾಜಿ ಮುಚ್ಚುವ ಬೆಡಗು ಮನದೊಳು ಪುಟ್ಟಿತಿಲ್ಲೆನಗೆ.
ಆಜಿಯೊಳಗೆ ಜಯಾಪಜಯಗಳು
ಸಾಜದಿಂದಸ್ಥಿರಗಳಂತೆಯೆ
ರಾಜಪದವಿಗೆ ಸಚಿವರೇರಿಸೆ ತೊಡಕಿಗೀಡಾದೆ.

೪೭

ಹೊಗದು ಸುಡಿ ಕಿವಿಯಲ್ಲಿ. ಪೂರ್ಬಿನ
ಬಿಗುಹು ಸಡಿಲದು. ನೆರೆದ ಕಪಿಗಳ
ಬಗೆಯು ನಿಬ್ಬಗೆ ಗೆಯ್ವತೆರದಿಂ ನುಡಿದನಾಕ್ಷಣದೆ.
ಒಗೆದು ಸೋದರನಾಗಿ, ತನ್ನೊಡ
ನಗಲದೆಯೆ ಇರುತಿರ್ದ, ತನ್ನನು
ಹಗೆಯು ಬಿಲದಲಿ ಹುಗಿದ ವ್ಯೈಗಾವಲಿನ ಪಟುಭಟನು. !

೪೮

ಕೂಡೆ ಬಂದನು. ಬಿಲಕೆ ಗುಡ್ಡವ
ದೂಡಿ ಹುಗಿದನು. ತನ್ನ ನೇಹಕೆ
ಕೇಡನೇ ಕೋರಿದನು ರಾಜನ ಶಾಸನವ ಮೀರಿ.
ಓಡಿದನು. ಕಣ್ಣಾರೆ ಕಾಣದೆ
ಮಾಡಿದನು ತಿಲತರ್ಪಣಂಗಳ.
ನೋಡಲಿಕೆ ಬಡಬತ್ತದಂತಿಹ, ಕುಟ್ಟಿ ಸರಿಯಕ್ಕಿ.

೪೯

ಸಹಜನೆನ್ನಿಸಿ ಬಿದ್ದು ಬೆನ್ನೊಳ
ಗಹಿತ ರಾಜದ್ರೋಹಿಯಾದನು.
ವಿಹಿತವಾದುದು ಮರಣದಂಡನೆಯಾದರುಂ ತನ್ನ
ಸಹಜನೆನ್ನುವ ಕತದಿನೀತನು
ಗಹನ ರಾಜ್ಯವ ಪುಗದೆ, ದೂರದ
ಲಿಹುದೆ ಶಾಸನ ತಪ್ಪದೆನ್ನುತೆ ನುಡಿದನಾವಾಲೀ.

೫೦

ನಡುಗಿ ಕಪಿಗಳು ನೊಂದು ಬೆಬ್ಬರ
ಗಡಲಿನಲಿ ಮರವಟ್ಟು ಮುಳುಗಲ್
ಕಡೆಗೆ ನಲಹನುಮಂತಮುಖ್ಯರು ವಾಲಿಯಡಿಗೆರಗಿ
ಒಡೆಯನೇ ಮನ್ನಿಪುದು, ಸೋದರ
ನೆಡರ ಕೋರಿದನಿಲ್ಲ, ಮನದೊಳ
ಗೆಡೆಯನೀಯುವನಲ್ಲ ಮೋಸಕೆ, ತಪ್ಪ ಮನ್ನಿಪುದು.

೫೧

ಬರಿಸವೊಂದರ ತೊಳಲು, ರಕ್ಕಸ
ರುರುಬಿನಬ್ಬರದೇಳ್ಗೆ, ರಕ್ತದ
ತೊರೆಯ ರೌದ್ರದ ನೋಟ ನೇರಿರೆ, ಮರಣಭೀತಿಯಲಿ
ಕರೆಕರೆಗೆ ಪಕ್ಕಾಗಿ, ತಮ್ಮನು
ಸರಿದನಲ್ಲಿಂದಲ್ಲದಿತರವ
ಚರಣತಲದೊಳು ಒಗೆದನಲ್ಲವು. ತಪ್ಪ ಮನ್ನಿಸೆನೆ,

೫೨

ಮನ್ನಿಪುದು ನೀಚನನು ? ಧೂರ್ತನ
ಮನ್ನಣೆಗೆ ಮಣೆವಿಡಿದು ನಿಲ್ವಿರಿ !
ಗನ್ನಗತಕನ ಭುಜವ ತಟ್ಟುವುದಿದಕೆ ನೀವೆಲ್ಲ
ಮುನ್ನವೇ ನಿಂದಿಹಿರಿ. ಸೇರದು
ಬನ್ನದುಣಿಸದು ನಿಮಗೆ, ತಟ್ಟದು
ಸಣ್ಣಬಾಳಿಗೆ ನಾಣು, ವಾಲಿಗೆ ನಾಲಗೆಯುದೊಂದೆ.

೫೩

ನುಡಿದನೀಪರಿಯಿಂದ ವಾಲಿಯು,
ನಡೆದನಂತಃಪುರಕೆ. ಕಪಿಗಳ
ಗಡಣ ಸರಿದುದು. ಹನುಮಮುಖ್ಯರು ಚಿಂತೆಯೊಳ್ಮುಳುಗಿ,
ಒಡೆಯನೇಕಿಂತಾದನೆಮ್ಮಯ
ನುಡಿಯ ಕೇಳನು. ಬನದೆ ಯೋಗದ
ಗೊಡವೆ ಜಾಂಬವಗೇಕೆ ಕಟ್ಟಿತೊ ಪೇಳ್ವರಿಲ್ಲವಲಾ !

೫೪

ಎಂದು ರಪಸೂಸುಪಸ ಬಳಿಗೈ
ತಂದು ದುಃಖವ ನುಂಗಿಸುತೆ, ಸಭೆ
ಯಿಂದ ತಂದರು ಹೊರಗೆ ನಾಣಿಂ ಮೊಗವ ತಗ್ಗಿಸುತ.
ಅಂದಗೆಡಿಸಿತು ಮನೆಯ ಕದನವು,
ದಂದುಗವ ತಂದಿಟ್ಟಿವಕಟಾ !
ಮುಂದಕೇಗೆಯ್ಯುವೆವು ? ಬೀಡಿಗೆ ತಾಣವೆಲ್ಲಿಹುದು ?

೫೫

ದನುಜಕುಲದವ, ಮೇಣು ಹಗೆಯುನು
ಮನದಲೇ ಗುಣಿಸಿದವ, ಬೆಂಗಡೆ
ಜಿನುಗಿ ತಪ್ಪಿದನಲ್ತೆ ರಾವಣನಾದರುಂ ವಾಲಿ
ಕನಲಿ ದಂಡಿಸಲಿಲ್ಲ. ತಪ್ಪನು
ಸನುನಯುದಿ ಮನ್ನಿಸಿದನದನೇ
ತನತು ಸೋದರನಲ್ಲಿ ತೋರನು. ಹೂವು ಕಲ್ಲಾಯ್ತು !

೫೬

ನಿನ್ನನೇರಿಸಿ ಪಟ್ಟವಣೆಯೊಳು
ಬನ್ನಗಳ ತಂದವರು ನಾಂಗಳು.
ನಿನ್ನ ಬನ್ನವದೆಮ್ಮದಾಗಿರೆ ನಿನ್ನಸೋಲ್ಕೈಸಿ,
ಮುನ್ನಿನಂತಿರೆ ಸೇವೆಗೆಯ್ವೆವು·
ಮನ್ನೆಯುನು ಮುನಿಪತಿಮತಂಗನು
ನಿನ್ನವಾಸಕೆ ಬೇಡಗೆಯ್ದುಹನಲ್ಲಿ ನೆಲಸಿರ್ಪ.

೫೭

ನೆಲೆಯುನರಸುವ ಚಿಂತೆ ಮನವನು
ಬಳಸೆ ಕುಗ್ಗಿದರಂತೆ ಕೆಲದೊಳ್
ನೆಲೆಯು ದೊರೆಯಲ್ಕನದ ಭಾರಮನಿಳುಹಿ ಮುಂಬರಿದು,
ನೆಲಸಿ ಬಂಧುರ ಋಷ್ಯಮೂಕದೆ,
ಪಲದಿನಂಗಳ ನೂಕುತಿರ್ದರು.
ತೊಲಗದೇರತು ಚಿಂತೆ ಪಷದಂತಿತ್ತಲೀತನಿಗೆ,

೫೮

ಮುನಿಯ ಶಾಪದೆ ಮಂಕು ಕವಿಯಿ
ತ್ತನುಜ ಕಣ್ಣಿನ ಬೇನೆಯಾದನು.
ವನದೆ ಯೋಗಕೆ ನಿಂದ ದೊಡ್ಡಯ ಮಂತ್ರಿಮಂಡಲದೆ
ಜನಿಸಿ ಛಿದ್ರವು ದೂರ ಸರಿಯಿತು.
ಮನದೆ ಕಾಮಾತುರತೆ ಪೆರ್ಚಿತು.
ವಿನಯವನು ವಿಾರಿದನು ವಾಲಿಯು ತುಳಿದ ಕಾಪಥವ.

೫೯

ಮಳೆಯು ಮೇಲ್ಕೊಳೆಯೆಂಬ ಬಗೆಯಿಂ
ಸೆಳೆದು ಸೋದರಪತ್ನಿ ರುಮೆಯಂ,
ಬಳಿಕೆಯುಂ ವಿಾರುತ್ತೆ ಪಾಪದ ಪಂಕದಲಿ ಕುಸಿದ.
ಬಳಿಯ ಕಪಿಗಳ ಮನಕೆ ಬೇಸರ
ಒಳಸೆ ಭಯದಿಂದುಸಿಕನಿರ್ದರು.
ಬಳೆಯಿತಿತ್ತಲು ಕೋಪಶಿಖಿ ಸುಗ್ರೀವ ಮುಖ್ಯರಲಿ.

೬೦

ವಾವೆ ವರಸೆಗಳೊಂದ ನೋಡದೆ,
ತೀವೆ ಕಾಮಾತುರವು, ಲೋಕದ
ಹೇವಮಂ ಮರೆದವನು ಸೋದರನಲ್ಲ; ಹಿತಶತ್ರು.
ಕಾವವನು ಮನೆಯಿಂದ ದೂಡಲ್,
ನೋವು ಪುಟ್ಟಿತು ; ಕೋಪ ಮೂಡದು.
ತೀವಿತವನೊಳ್ ಕೋಪವಿಂತಿವನೆಸೆಗೆ ಪಾಪವನು

೬೧

ನೆನಪು ಸಂತತವಾಯ್ತು ನಿಲ್ಲದು.
ನೆನಪಿನೊಡನೇರಿತ್ತು ಕೋಪವು.
ಕಿನಿಸಿದಿಂ ದೇಹಾತ್ಮಬುದ್ಧಿಗಳೆಲ್ಲ ಕಡುಗಾಯ್ದು,
ದಿನದಿನಕೆ ಪಾವಕನ ಕಾಯ್ಪಿಂ
ಮಿನುಗುತಿಹ ಕರ್ಬೊನ್ನು ತಾನೆನೆ,
ಕನುಗುತಿರ್ದನು ತಮ್ಮನಿತ್ತಲು ಸಿಡಿದು ಮಿಡಿಯುತ್ತ.

## ಪಂಚಮತರಂಗ

# ವಧೆ ಮತ್ತು ಪಟ್ಟಾಭಿಷೇಕ

ಪಡುವಲಿಂ ಜಿಗಿಯಿಲ್ಲವಾದೊಡ
ಮಡರ ಮೇಘಂ ಮುಚ್ಚಿ ಗಗನವ
ತುಡುಕಿ ನೇಸರನೊತ್ತಿದೆಸೆಗಳ ಮಬ್ಬ ಪರ್ಬಿಸಲು,
ಗಿಡುಮರಗಳಂತೆಲ್ಲ ಮಿಗಗಳ್
ಜಡತೆಯಂ ತಾಳುತ್ತೆ, ಮಬ್ಬಿನ
ಕಡಲಲದ್ದಂತಿರ್ದುವಂದಿನ ದಿನದ ಬೆಳಗಿನಲಿ,

೨

ಕಿತ್ತಡಿಯ ಶಾಪವುದು ಪಸರಿಸಿ,
ಪತ್ತಿ ಮಲೆಯಂ ಸರಿದು, ವಾಲಿಗೆ
ಮಿತ್ತುವಿನ ಕುರುಪಾಗಿ ಸುಳಿದುದು ದಿಟಮಿದೆಂಬಂತೆ;
ನುತ್ತಣಾಸೆಯು ಮುಸುಕಿ, ಲೋಕದ
ಚಿತ್ತಕಂ ಜಾಡ್ಯವನು ಕವಿಯಿಸು
ತೆತ್ತಲುಂ ಪಸರಿಸಿತು ವೋಡದ ತೊರೆಯು ಜಡಮಯುವು.

೩

ಅಂದು ಕೀಶಾಧಿಪನು ರಾಣಿಯ
ರಿಂದಲಂತಃಪುರದೆ ನಲಿಯುತೆ,
ಹಿಂದಸಲ್ಲವ ಮರೆದು ಸೊಗಸೊದೆಯುಂಡು ತಣಿದಿರಲು,
ಬಂದಿಹನು ಸುಗ್ರೀವ ಮೃತ್ಯುವು,
ದಂದುಗವನುಣಬಡಿಸಲೋಸುಗ.
ಪಂದೆವಾಲಿಯು ಸಿಕ್ಕಿಮುಕ್ಕುವ ಕುಳುಹಿರವನೆಂಬ,

೪

ಕೂಗ ಕೇಳುತಲುರಿದು ವಾಲಿಯು,
ಬೇಗದಿಂದೆದ್ದೋಡಿ, ಮುಂಗಡೆ
ತಾಗುವಾಭರದಿಂದ ನಿಂದಿಹ ತಮ್ಮನನು ಕಂಡ.
ತೂಗಿ ಹೆಗ್ಗೊಂಬೆಯನು, ಕಿನಿಸಿಂ
ಜೀಗಿ ಹೊಸಪರಿಯಿಂದ ನಿಶ್ಚಲ
ನಾಗಿ ನಿಂದುದನಂದೆ ಕಂಡನು. ಪಿಂದೆ ಕಾಣನವ.

೫

ಪಿಂದೆ ತಪ್ಪಿದ ಹರಣದಳಿಪಿಂ
ಗಿಂದು ಬಯಕೆಯ ತೋರಿ ಬಂದೈ ?
ಕೊಂದೆನೆಂಬಪಕೀರ್ತಿ ತಪ್ಪಿತು. ಯುದ್ಧದೊಳ್ಮಡಿದು,
ಇಂದಿರನ ಲೋಕದಲಿ ಸೊಗಗಳ
ನೊಂದಿ ಬದುಕಲ್ತೆರಳು. ನೆರವಿಗೆ
ಬಂದಿಹೆನು ನೆಲೆಯಿಲ್ಲ ರಾಜದ್ರೋಹಿಗಿಹದೊಳಗೆ.

೬

ಸೋದರನ ತನ್ನಂತೆ ಕಾಣದ,
ಸೋದರನ ದೈನ್ಯವನು ಕೇಳದ,
ಸೋದರನ ಪೆಣ್ಮಣಿಯೊಳಳುಪಿಪಾರ್ತತಾಯಿಯೊಳು
ಕಾದಿ ಕೊಲ್ವಾಒಲ್ಮೆನಿಲ್ವುದೆ ?
ಕಾಯ್ದುಕೊಂಡಿದೆ ಮೃತ್ಯು ಮರೆಯಲಿ.
ಮೋದಿ ಮುಕ್ಕದೆ ಬಿಡದು ಪತಿತನನೆಂದ ಸುಗ್ರೀವ.

೭

ನೆಂಟು ನೇಹವು ಮರೆಯೆ, ಹಿರಿಕಿರಿ
ಯುಂಟು ದೂರಕೆ ಸರಿಯೆ, ಹಗೆಗಳ
ಬಂಟರಾಗಿಯೆ ಹೋರುತಿರ್ದರು. ನೋಳ್ಪ ಕಪಿಕುಲದ
ಕಂಟಕಿತವಾಗಲ್ಕೆ ಮೆಯ್ಗಳು,
ಬಂಟನೋರ್ವನ ಕಾಣೆ ತಪ್ಪಿಸ
ಲಂಟು ಹರಿದುದು. ಕಿಲುಬು ಸರಿಸವು. ಮುಯ್ಗೆ ಮುಯ್ಯೇಟು.

೮

ಇಟ್ಟ ಮರ ತುಂಡಾಯ್ತು. ಗುಂಡುಗ
ಳೊಟ್ಟು ಪುಡಿಪುಡಿಯಾಯ್ತು. ವಾಲಿಯು
ಮುಟ್ಟಯಿಸಿ ಪಿಡಿದೆತ್ತಿ ಡೊಕ್ಕರಿಸಿದನು ತಮ್ಮನನು.
ಬಿಟ್ಟ ಬಾಯ್ಕಣ್ ಮೂಗುಕಿವಿಗಳಿ
ನಿಟ್ಟಣಿಸಿ ಕೆನ್ನೀರು ಚಿಮ್ಮಿತು.
ಕೆಟ್ಟೆನೆಂದಲ್ಲಿಂದ ಕಾಲಿಗೆ ಬುದ್ಧಿವೇಳ್ದನವ.

೯

ಜೀವಗಳ್ಳನೆ ಬದುಕು. ಭೀತನ
ನಾವು ಕೊಲ್ಲುವರಲ್ಲ. ಧರ್ಮವ
ಕಾವ ನೇಮವ ನಿನ್ನೊಳೀತಕೆ ಏರಿ ಹದಗೆಡಲಿ.
ಓವಿ ರಕ್ಷಿಸಿದಣ್ಣಯುಗೆ ನೀಂ
ಸಾವನಂದೇ ಬಗೆದೆಯಿಂದೇಂ
ಭಾವಿಸಲ್ಪಿರಿಯಣ್ಣನಿಹಸೇ ? ಬದುಕು ಹೋಗೆಂದ.

೧೦

ತಿರುಗಿದನು ಮನೆಯತ್ತ ವಾಲಿಯು.
ಸರಿದನತ್ತಲ್ ದಿನಪನಾತ್ಮಜ.
ಪೆರನನಚ್ಚಿದೆ ಕೆಟ್ಟೆನಕಟಾ ! ಋಷ್ಯಮೂಕದೊಳು
ತೆರವು ವಿಸ್ತರ ನೆಲೆಗೆ. ಪೊಡೆಯಂ
ಪೊರೆಯಲಿಲ್ಲವೆ ಪಣ್ಣುಕಾಯ್ಗಳು ?
ಭರವಸೆಯ ಕೊಟ್ಟಾತ ಮಿತ್ರನೊ ಶತ್ರುವೋ ? ಎಂದು.

೧೧

ಹೊತ್ತು ತಿರುಗಿತು ಪಡುವಲದ್ರಿಗೆ.
ಮತ್ತನಾಗುತೆ ಸತಿಯ ತೊಡೆಯೊಳ
ಗುತ್ತಮಾಂಗವನಿಕ್ಕಿ ವಾಲಿಯು ಮಲಗಿ ನಿದ್ರಿಸಿದ.
ಇತ್ತ ತಮ್ಮನು ಮರಳಿ ತೋರಣ
ದತ್ತ ಗರ್ಜನೆಗೆಯ್ಯಲೀತನು
ಮತ್ತಿನಲಿ ಹಾ ! ಎನ್ನುತೆದೆಯನು ಮುಟ್ಟುತೆಚ್ಚತ್ತ.

೧೨

ಹೊರಗೆ ಮೈದುನನಬ್ಬರಣೆಯೊಳ
ಗೆರೆಯುನಾಕಳವಳವು, ತಾರೆಗೆ
ಕರೆಕರೆಯು ಮುಗಿಲಾಯ್ತು. ಕಾಂತನ ತಿಳುಹ ಕೇಳಿದಳು.
ಹರಿಯೆ ನಿದ್ದೆಯ ಮಂಕು, ಸುತ್ತಲ್
ಮುರಿದು ನಕ್ಕನು ವಾಲಿ. ಕನಸಿನ
ಪರಿಯ ಸತಿಯುಳಿಗೆಂದ. ನಗದಿರು ಪೊಳ್ಳುಕತೆಯಿದಕೆ.

೧೩

ಪೊಸಪರಿಯ ಫಲವೊಂದನುಣ್ಣ
ಲ್ಕೊಸೆದು ಚಾಚಿದೆ ಕಯ್ಯನಾರೋ
ಮಸಿಯ ಮೆಯ್ಯವ ವಜ್ರದಿಂದೆನ್ನೆದೆಯ ಭೇದಿಸುತೆ
ಅಸುವ ಸೆಳೆದಂತಾಯ್ತು ಮರೆಯಿಂ.
ಮಸಗು ತೇರ್ದುದು ನೋವು. ಭೀತಿಯು
ಪಸರಿಸಿತು. ಕೂಗಿಟ್ಟೆ. ಸುಳ್ಳಿನ ಬಲ್ಮೆ ಕಿರಿದಲ್ಲ.

೧೪

ಎನಲು ನಕ್ಕಳು ತಾರೆಯಿತ್ತಲ್
ದಿನಪಸುತನಬ್ಬರವು ಪರ್ಬಿತು.
ಕನಲಿ ಕಿಡಿಯುಗುಳುತ್ತೆ ಕಣ್ಣಿಂದೆಳ್ದನಾವಾಲಿ.
ಮನದೆ ಭೀತಿಯು ಮೂಡೆ, ಮಡದಿಯ
ಳಿನಿಯನಂ ಬಿಗಿಯಪ್ಪಿ ನುಡಿದಳು,
ಕನಸ ಕಿವಿಯೊಳು ಬಿಳ್ದ ಬಾರ್ತೆಗೆ ಗಂಟನಿಕ್ಕುತ್ತ.

೧೫

ಪೊಸಪರಿಯ ಫಲ ರುಮೆಯೊ, ಮತ್ತಂ
ಮುಸಿಯ ಮೆಯ್ಯುವ ದಶರಥಾತ್ಮಜ.
ಸಿಸುಗೆ ಮರೆಯಿಂ ವಜ್ರದಂತಿರಲೆದೆಯ ಭೇದಿಪುದೋ !
ಮುಸಗಿ ಮೋಸದಿ ಕೊರಲ ಕೊಯ್ಯುವ
ರೆಸಕಕೇಂ ವಿಧಿಯುಂಟೆ ? ಕಾಂತನ
ಸಸಿಸೆ ತಡೆವೆಸೆಸುತ್ತೆ, ತಾರೆಯು ಸುಟದು ತೋರಿದಳು.

೧೬

ದಶರಥನ ಸುತ ರಾಮುಸೆಂಬನೊ
ಳೆಸಗಿ ಕೆಳೆಯಂ ತಮ್ಮ, ನಿನ್ನಯ
ವಿಶಸನಕೆ ಯತ್ನವನು ಗೆಯ್ಸಿಹಸೆಂಬ ಸುದ್ದಿಯುದು
ಪಸರಿಸಿದೆ. ಲಘುವಲ್ಲ ಕನಸುಂ.
ವಿಷಮುವಾಗಿದೆ ಕಾಲ. ಮೋಸದ
ಬಸುರೊಳಡಗಿಹುದಾವಕೂಸೋ ! ಮುನ್ನಿ ಸಾತಸನು.

೧೭

ತಾರೆ, ಭೀತಿಯ ತೊರೆಯು. ಮನುಜರ
ದಾರಿಯೊಳು ನಾವಡ್ಡಬಾರೆವು.
ಧೀರರಘುಜರೊಳಿಲ್ಲ ಕಪಟವು. ಮೇಣು ಸಹಜಂಗೆ
ಮಾರಿಯುಲ್ಲವು ತಾನು. ನೇಮುವ
ಮೀರಿ ನಡೆದನ ಮುನ್ನಿಸೆನು. ಕೈ
ದೋರದಿರಲಪಯುಶವು. ಸಹಜನ ಕೊಲ್ಲುವನುಮಲ್ಲ,

೧೮

ಕಡುಗಲಿಯುನಡಗಟ್ಟುವಾಸೆಯು
ಸಡಿಲಬಿಟ್ಟಳು ತಾರೆ. ತೋರಣ
ದೆಡೆಯು ಸಾರ್ದನು ವಾಲಿ. ಮುಷ್ಟಾಮುಷ್ಟಿಯುದ್ಧದಲಿ
ತೊಡಗಿ, ತಮ್ಮನ ಶೌರ್ಯಕುಲ್ಬವ
ಬಡಬನೆನೆ ಬತ್ತಿಸಿದ ನಿಮಿಷಕೆ.
ಕಡೆಗೆ ಸುಗ್ರೀವಂಗೆ ಜಂಘೆಯು ನೆರವು ಸೊಗವೆನಿಸೆ.

೧೯

ಹೊಂಚಿ ಮರೆಯಿಂದೊಂದು ಬಾಣವು
ಮಿಂಚಿನಂದದಿ ಸರದು, ವಾಲಿಯು
ಕಂಚಿನೆದೆಯನು ಚುಚ್ಚಿ ಮೂಡಿತು ಬೆಂಗಡೆಯೊಳವನು
ಸಂಚಲಿತವಾಗಲ್ಕೆ ಕಾಲ್ಗಳು
ವಂಚನೆಗೆ ಪಕ್ಕಾಗಿ, ಹಿಂದಕೆ
ಮುಂಚಿದನು. ತತ್ತರಿಸಿ ಝೊಂಪಿಸುತಪ್ಪಿದನು ನೆಲನ.

೨೦

ಅಬ್ಬರಿಸಿ ಸುಗ್ರೀವ ಹರ್ಷದಿ
ನುಬ್ಬಿ ನಿಂದನು. ರಾಮಲಕ್ಷ್ಮಣ
ರಿಬ್ಬರುಂ ಪೊದೆಯಿಂದ ಸುಳಿದರು ಬೀಳ ನೋಡಲ್ಕೆ.
ಮಬ್ಬು ಮೋಡವು ಕೊಲೆಯ ಸುದ್ದಿಯು
ಹಬ್ಬಿದುವು. ವಾನರರ ಹೃದಯಗ
ಳಿಬ್ಬಗೆಗೆ ಸೀಳಿದುವು ವಾಲಿಯ ಹೃದಯದೊಡನಾಗ.

೨೧

ಹಾಯೆನುತೆ ಕಣ್ಬಿಟ್ಟು, ಮುಂಗಡೆ
ಮಾಯಗಾರನ ಕಂಡನಸುಜನ
ಕಾಯಲೋಸುಗ ಕೋಲ ಮರೆಯಿಂ ಸೂಸಿದಾತನನು.
ಕಯ್ಯ ಬಲದಿಂ ಕಾದಿ ಗೆಲ್ಲುವ
ದಾಯ ತಪ್ಪಿದುದಾದೊಡೆಯುಮವ
ಬಾಯ ಬುದ್ಧಿಯ ಬಲ್ಮೆಯಲಿ ಹೋರಾಡಲೆಳಸಿದನು.

೨೨

ಕಾವಿಯುಡುಗೆಯ ಬಿಲ್ಲುಬಾಣದ
ಭಾವನಾರ್ಕೆ ? ತಲೆಯ ಮೇಲ್ಜಡೆ
ತೀವಿ ಬಳೆದಿದೆ. ಮೊಗಕೆ ಏರಿದೆ. ಮೂಡಗೆಯೊಳೆಲ್ಲ
ತೀವಿ ತುಂಬಿದೆ ಪಾಪದೊಟ್ಟಿಲು.
ಭಾವಗಳು ಮೈಬಣ್ಣದಂತಿವೆ.
ನಾವು ಪೇಳ್ವುದು ಕಿವಿಯ ಭೇದಿಸಿ ಪುಗುವುದೇನೆದೆಯ ?

೨೩

ತರಣಿವಂಶದ ಕುವರ ರಾಮನು
ಚರಿಸುತಿಹನಿಲ್ಲೆಂದು ಕೇಳ್ದೆನು
ವರಮುನಿಯ ವೇಷದಲಿ. ರಾಜಸ ಹೊಳೆಯುತಿದೆ ಮೊಗದೆ.
ಇರುವುದಂತೆಯೆ ವಾಲಿ; ನಾಂಗಳು
ಚರಿಸುತಿಹೆವಿಲ್ಲಿಲ್ಲೆ; ಬಾಣದ
ಗೆರೆಯ ಸಿರುಕಿಸು; ನಮ್ಮ ಪರಿಚಯವೆದೆಯ ಮುಟ್ಟುವುದು.

೨೪

ಮುಟ್ಟಿತಾಗಳೆಯೆದೆಯ. ಗರುಡಿಯು
ನಿಟ್ಟು ಕಲಿಸಿದನಲ್ತೆ ಬಿಲ್ಲನು
ಶಿಷ್ಟರಾಜನವಿಪ್ರಕುಲಗಳ ಬೆರಕೆಯುಲಿ ಕೆಟ್ಟ
ಸುಟ್ಟವೋರೆಯು ಕೌಶಿಕನು. ನೀ
ನಿಷ್ಟಶಿಷ್ಯನು. ನಿನ್ನ ಮನದೊಳ್
ಪುಟ್ಟಲಿರ್ಪುದೆ ಧರ್ಮಯುದ್ಧದ ಚಿಂತೆ? ಹಾ ನೋವು!

೨೫

ನಿಂದೆದೂಷಣೆಗಳಿಗೆ ನಿಲುಕದು
ದೊಂದುಮಿಲ್ಲವ್ರ ವಾಲಿ. ಬೇಂಟೆಗೆ
ಹೊಂದಿದುದು ಮರೆವೋಸ ರಾಜರಿಗದರ ಗಂಟುಂಟು.
ಇಂದು ಶಾಖಾಮೃಗವ ಮರೆಯಿಂ
ಕೊಂದೆನದರಿಂ ದೋಸವೆಂತ್ತೆ?
ಕಂದು ಮೂಡದೆ ಬಿಡದು ಧರ್ಮವ ದೂರೆ, ನರಕವುಲೇ!

೨೬

ನರಗೆ ಮೃಗಗಳ ಬೇಂಟೆ ಸಲೆ ವಾ
ನರಗೆ ನರರಾಬೇಂಟೆ ಕೂಡದೊ?
ಮಿರುಗುವಾತಿನ ಬಣ್ಣಗಾರನೆ, ರಾಮ ಮೃಗಮಾರು?
ಮರೆದು ಯುದ್ಧದ ಧರ್ಮಮಂ ಗಿಡು
ಮರೆಯಿನೆಸೆದವಿವೇಕಿಯೋ? ಮೋ
ಣ್ಪೊರೆದು ರಾಜರ ಯುದ್ಧಧರ್ಮವ ನಡೆದವನು ಮೃಗವೋ?

೨೭

ಮರೆದು ಧರ್ಮಮನಟ್ಟಿ ಸೋದರ
ವರನ ಸತಿಗಳುಪಿದವನೆಂತುಂ
ನರನೆ ? ಮರೆಯಿಂ ಕೊಲ್ಲುದುಚಿತದ ಕಾರ್ಯಮಲೆ ವಾಲಿ.
ನರನು ತಪ್ಪುವನಹುದು. ಮೃಗವೆನೆ
ಚರಿಸುವನು. ದಂಡನೆಯ ಗೆಯ್ಯುವ
ನರನು ಮರೆಯಿಂ ಕೊಂದು ಕೂಗುವುದುಂಟೆ ಘಾತುಕನೆ ?

೨೮

ಸೋದರನ ಸತಿಗಳುಪಿ ಮೃಗಗಳ
ಸೋದರನೆ ನೀನಾದೆ. ಮತ್ತಂ
ವಾದದಲಿ ನರನಂತೆ ಜಾಣ್ಮೆಯ ತೋರ್ಪೆಯಿಂತಿರಲು
ಹಾದಿಯಾ ಮೃಗ ಬೀದಿಯಾ ನರ
ಕೋದು ಸೇರಿರಲೆರಡುಮಲ್ಲವು.
ವಾದಕೇನೆಡೆಯುಂಟೆ ? ಮೋಸದ ಕೊಲೆಯೆ ಸರಿಯಲ್ತೆ ?

೨೯

ವೇಷದಿಂ ಯತಿಯಾಗಿ. ಜನ್ಮವಿ
ಶೇಷದಿಂ ರಾಜನ್ಯನೆನಿಸುತೆ,
ಮೋಸದಿಂ ಧರ್ಮವನು ಕಿಡಿಸುತೆ ಮೂರ್ಖತಮನೆನಿಪ
ಸಾಸಿಗನು ನಾಡಾಡಿಯತಿಯೋ ?
ಹೇಸಿಗೆಯ ನೃಪನಂತೆ ಬೆರಕೆಯೊ ?
ಶಾಸನವ ನೀನವಗೆ ವಿಧಿಸುವ ಮರ್ಮವನು ಪೇಳ.

೩೦

ದೂಸರಕೆ ಸರಿಯಾದ ದಂಡನೆ
ಯೈಸೆ ತಪ್ಪಿದ ನರನಿಗೀವುದು ;
ದೋಸಮಂ ಬಲಿದಲ್ತೆ ದಂಡನೆಗೆಯ್ವುದದನುಳಿದು
ಹೇಸದೆಯೆ ಕೂರಲಗ ಮರೆಯಿಂ
ಸೂಸಿರುವೆ. ದಂಡನೆಯು ವಿಧಿಸುವ
ಸಾಸಿಯೊಂದೇ ಪಕ್ಷದಭಿಮತಗೇಳ್ದು ದಂಡಿಪನೆ ?

೩೧

ಇರಲಿಮದುವುಂ ಧೂರ್ತ, ರಾಜ್ಯವ
ತೊರೆದವಗೆ ಲೋಕದಲಿ ಧರ್ಮದ
ಮರೆಯುಲೆಂತುಂ ಶಾಸನಂಗಳ ಮಾಡೆ ವಿಧಿಯುಂಟೆ ?
ಭರತಭೂಮಿಶ್ವರನು. ಕಾಡಿಂ
ಗರಸು ನಾಂ. ಪರತಂತ್ರನಲ್ಲವು.
ಮೆರೆವುದುಚಿತವೆ ಪೇಳು ಮೋಸವ ? ನೊಂದೆ ಹಾ **ನೋವು** !

೩೨

ಮನುಕುಲದೆ ಪುಟ್ಟಿರುವೆ. ಧರ್ಮದಿ
ಮನುಜರನು ಪಾಲಿಸುವ ಭಾರವ
ನನುವಿನಿಂ ತಾಳ್ದಾತನಾಗಿಹೆ. ವನಚರಾಧಿಪನ
ವನದೆ ಒದುಕನು ಸೂಕೆ ಬಂದಿಹೆ.
ನಿನತು ಬಾಣದಿನುಂಡಮನೆಗೆರ
ಡೆಣಿಸಬಹುದೇ ಶೀಲವಂತರ ಕುಲದ ಹಿರಿಗುವರ ?

೩೩

ಶೀಲಸತ್ಯಾಚಾರಸಮಿತೆಯ
ಪಾಲಿಪರು ರಘುತನಯರೆಂದಿರೆ,
ಕೋಲಮರೆಯಿಂದೆಸೆದು ಧರ್ಮವ ಮೀರಿದೆಯ ರಾಮ!
ಶೀಲವಿರಹಿತನಾಗಿ ಮೃಗಯಾ
ಲೋಲುಪತೆಯಿಂದಂಧನಾದೈ!
ಬಾಲಿಶನೆ, ನೀಂ ಹುಲ್ಲು ಮುಚ್ಚಿದ ಹಾಳುಬಾವಿಯಲೇ?

೩೪

ಬೇಟೆಯಿಂದ ತಿನ್ನುವೆಯ? ಚರ್ಮವ
ಪಾಟಿಸುತೆ ಪಾದುಕೆಯ ಗೆಯ್ವೆಯ?
ಕೋಟಿಯೊಳು ರಾಜನ್ಯಸಂತಿರೆ ಮೆರೆದೆಯೇಂ ರಾಮ?
ಪಾಟಿಸದೆ ಸಭ್ಯರ್ಕಳೆದೆಯ ಕ
ವಾಟ ಕೇಳ್ದಾ ಸಚ್ಚರಿತ್ರರ?
ಕೂಟ ಯುದ್ಧಕೆ ತ್ರೇತೆಯೆಡೆಗೊಟ್ಟೊಪ್ಪಿತೇ? ಹಾ! ಹಾ!

೩೫

ಎನ್ನ ವಧೆಯಾಯ್ತಿಲ್ಲ; ರಾಮನೆ,
ನಿನ್ನ ಧರ್ಮದ ವಧೆಯು. ಮನುಕುಲ
ದುನ್ನತೋನ್ನತಕೀರ್ತಿಲತೆಯನು ಮಣ್ಣುಗೂಡಿಸಿದೆ.
ಬೆನ್ನೊಳಗೆ ಬಿದ್ದವನ ತಪ್ಪನು
ಬಣ್ಣವೇರಿಸಿಯಾಯ್ತು. ತಮ್ಮನ
ನಿನ್ನ ಜೋಡಿಯು ಧರ್ಮನರಕದ ಕೂಟವಾಗಿಹುದು.

೩೬

ರಾಜಧರ್ಮವೊ, ಬಂಧುಧರ್ಮವೊ
ಮಾಜದುಸಿರ್ಗೆ ಪಿರಿಯದಾವುದು ?
ಸಾಜನೆನ್ನಯ ಸಂಟನೆನ್ನುತೆ ನುಸ್ಸಿ ಸಲ್ಬಹುದೆ ?
ರಾಜವಿದ್ರೋಹಿಯನು ಬೆಂಗೊಂ
ಡಾಜಿಯೊಳು ಮರೆವೋಸವೆಸಗಿದೆ.
ರಾಜಧರ್ಮವ ರಕ್ಷಿಸಿರ್ಪೆಯ ? ಎಂದು ಮೈಮರೆದ.

೩೭

ದೂರಹತ್ತಿರವೆಂಬ ಲಘುತರ
ಸಾರತರವೊಂದೆಂಬ ತೋರ್ಪ
ತೋರದಿಹ ಪುರುಳೆಂಬುದೊಂದುಂ ರಾಮಬಾಣಕ್ಕೆ
ಸೇರದೆನಲಚ್ಚರಿಯೆ ? ಮರೆಯೊಳ್
ದೂರವಾಗಿರ್ಪಬಲೆಯೆನಿಸಿದ
ತಾರೆಯೆದೆಯನು ಸರಲಸುದ್ದಿಯೆ ಸೀಳ್ದುದಚ್ಚರಿಯು !

೩೮

ಸಿಡಿಲ ಹೊಯ್ಕೆ ಸುಟ್ಟ ಬಾಳೆಯ
ಗಿಡುವೆನಲ್ ನೆಲನಪ್ಪಿ ಮರೆದಳು
ಗೆಡೆಯ ದಾಸಿಯರುಪಚರಿಸೆ ನಸು ಧೈರ್ಯಮಂ ತಾಳ್ದು,
ಒಡನೆ ಬರಲಂಗದನು ಕೆಳದಿಯ
ಪಿಡಿದು ನಡೆದಳು ತನ್ನ ಚೇತನ
ದೊಡೆಯನಲ್ಲಿಹನೆಂದು ಬರಿಗಾಲಿಂದೆ ಕಾತರಿಸಿ.

೩೯

ಕೆಡೆದ ಸಹ್ಯದ ಕೂಟದಂತಿರೆ
ಪೊಡವಿಯುಪ್ಪುತೆ, ರಾಮಬಾಣದ
ಸಿಡಿಲ ಹೊಯ್ಲಿಂ ನೊಂದು ಬಿದ್ದಿಹ ಪತಿಯ ಕಾಣುತ್ತೆ
ನಡುಗಿ ಹಾಹಾಯೆಂದು, ಕಣ್ಣೀರ್
ಮಡಲಿಡಲು ಬೀಳುತ್ತೆ, ಕಿಚ್ಚಲಿ
ಕೆಡೆದ ಪುಳುವೆನೆ ಪೊರಳಿ ಮುಮ್ಮಲ ಮರುಗಿದಳು ತಾರೆ

೪೦

ವೈರಯಿದಿರೊಳು ದೀನಭಾವವ
ಧೀರ ನೀಂ ತೋರಿರ್ದುದಿಲ್ಲೆಲೆ.
ತೋರತೋಳಿಂ ಪುಳುಗಳಿವುಗಳನೊರಸದೇಕಾದೆ?
ಬಾರಿಬಾರಿಗು ಬಂದ ಬವಣೆಯು
ತೂರಿ ಹೊಯ್ದುವನೆಕ್ಕತುಳದಲಿ
ಚೋರನಿದಿರಲಿ ದೀನನಂತಿರೆ ಮಲಗಿದೆಯ ಕಾಂತ!

೪೧

ರಾಜಮಾರ್ಗವ ತುಂಬಿ ಕೆಳೆಯರ
ಸೋಜಿಗದ ಸೊಲ್ಲಾಲಿಸುತ್ತೆ, ವಿ
ರಾಜಿಸುವ ಗಜರಾಜನಂತಿರೆ ಸುಳಿದೆಯೈ ರಮಣ.
ಮೂಜಗದ ಕಲಿಯೆನಿಪ ಗೋಲಭ
ಗಾಜಿಗೊಟ್ಟುದನೆಂತು ಮರೆಯಲಿ?
ರಾಜ, ಸದ್ಗುಣಭರಿತ ಸತಿಯಳ ನೋಡು ದಯೆಯಿಂದ.

೪೨

ಕಾನನದ ಸಿರಿ ಚೈತ್ರರಂತೆ ಸ
ಮಾನಹೃದಯದೆ ಸುಳಿದು ತಣಿದುದ
ನೇನಗೆಯ್ದಾಂ ಮರೆವೆ ? ಜೀವನ ಜೀವನೀನುಸಿರು.
ಪಾನಗೋಷ್ಠಿಯಲೊದಗಿ ಮನದಾ
ಬೇನೆಗಳೆದುದನೆಂತು ಮರೆಯಲಿ ?
ಮಾನಗೆಟ್ಟೆಲ್ಲಿರ್ದು ಬದುಕಲಿ ರಮಣ ನಿನ್ನಗಲಿ.

೪೩

ಮೈದುನನೆ, ನಿನ್ನಿಷ್ಟಸಿದ್ಧಿಯು
ಕೈದುಕಾರನಿನಾಯ್ತು. ಪುರೆಯಿಂ
ಪೊಯ್ದು ಮೋಸಂಗೆಯ್ದು ಪಡೆದೈ ರಾಜ್ಯದೈಸಿರಿಯ
ಮೋದದಿಂದನುಭವಿಸು. ರಮೆಗಿಂ
ದಾದಜಯಮಂ ತಿಳಿಸು. ಮಾರ್ಗವ
ಕಾಯ್ದು ಕುಳಿತಿಹಳಲ್ಲಿ. ನಡೆ, ನೀನವಳ ಸಂತೈಸು.

೪೪

ಅಂಗದನೆ ಬಾರಿಲ್ಲಿ. ತಂದೆಯ
ಮಂಗಳಾಸ್ಯವ ನೋಡು. ನೆಣಸೊಳು
ಪಿಂಗದೆಲ್ಲರ ತರಿದ ಕಲಿಯನು ವಂದಿಸೈ ಕಂದ.
ಅಂಗದಗೆ ಸಂದೇಶಮೇನೈ
ಭಂಗರಹಿತನೆ ? ನಿನ್ನ ಶೌರ್ಯವ
ನಂಗದಗೆ ನೀಂ ನೀಡುತೌರಸಪುತ್ರನಂ ಪೊರೆಯೈ.

೪೫

ಪತಿಯು ಲೋಕವ ಪೊಕ್ಕು ಬಾಳುವ
ಸತಿಯೆ ಸೌಭಾಗ್ಯಕ್ಕೆ ನೆಲೆವನೆ.
ಶಿತಶರದಿನಿಸುತೆನ್ನ ಕಳುಹೈ ರಾಮ ಕರುಣಾಳು.
ಮತಿಯುತನೆ, ತಾಟಕೆಯ ವಧೆಯಿಂ
ದತುಲಕೀರ್ತಿಯು ತಾಳ್ದು ಸುರಿತಿಹೆ.
ಜೊತೆಯನಗಲಿಸಬೇಡ. ಜಯಮುಂ ಪೂರ್ಣವಾಗುವುದು.

೪೬

ತಾರೆಯುಳಲಿಂ ಕವರ್ದು, * ವಾನರ
ನಾರಿಯರ ಗೋಳಿಂದ ಕಿಡಿಯಿಡು
ತೇರಿ ವಾನರಕುಲದ ಶೋಕದೆ ನಾಲಗೆಯ ಚಾಚಿ,
ಭೂರಿದುಃಖಾಗ್ನಿಯದು ವಾನರ
ವೀರರೊಳ್ ಕೋಪಾಗ್ನಿಯೆನಿಸುತೆ,
ತಾರೆಯಾಜ್ಞೆಯ ಪಾರೆ ದಹಿಸಲ್ ತಿಳಿದನಾವಾಲೀ.

೪೭

ಕಡಿಯಿರಿರಿಯಿರಿ ಕೊಲ್ಲಿ ಮಿವರನು
ತಡೆದೊರಸಿ ಕೊಂದಿಕ್ಕಿಮೆನ್ನುತೆ
ಜಡಿದು ವಾನರರೆಲ್ಲ ಕದನಕೆ ನಿಂದರಾಕಡೆಯೊಳ್
ಹಿಡಿದ ಧನುವಿನ ಹೆದೆಯ ನೂಲನು
ಮಿಡಿದು, ಸುಗ್ರೀವಾದಿಕಪಿಗಳ
ಗಡಣದಿಂ ಸಿರಿರಾಮಲಕ್ಷ್ಮಣರೊದಗಿ ನಿಂದಿರಲು,

೪೮

ಸಾಸಿಗರು ನೀವಹುದು, ನಮ್ಮೊಳ
ಗೀಸುದಿನವೊಳಜಗಳವಿಲ್ಲವು.
ದೂಸರೊದಗಿತು ತಮ್ಮನೆಸಕದಿವಂತೆ ತನ್ನಿಂದ.
ಮೋಸದಿಂದಾನಳಿವೆನದರಿಂ
ದೋಸವಿಲ್ಲವು. ಮುಂದೆ ಕಪಿಕುಲ
ನಾಶಕರವಾಗಿರ್ಪುದಂತಃಕಲಹ ಬೇಡೆಂದುಂ.

೪೯

ಎನ್ನ ಮರಣದಿನದುವೆ ಕೊನೆಗೊಳ
ಳುನ್ನತಿಯು ಮಾರ್ಗದಲಿ ನಡೆವುದು.
ಬನ್ನಮಳಿಯಲ್ ನಲ್ಮೆ ಬಳೆವುದು. ಕೀರ್ತಿ ದೆಸೆದೆಸೆಗೆ
ಇನ್ನು ಮೇರುತೆ ಬೆಳಗಲಿಂ. ಸಂ
ಪನ್ನರೆನಿಸುತೆ ಬಾಳಿ. ಲೌಕಿಕ
ದುನ್ನತಿಯುನಪಯಶಕೆ ಮಾರದಿರೆನ್ನ ಬಂಧುಗಳೇ.

೫೦

ಬಾಳ್ವುದೊಗ್ಗಟ್ಟಿನಲಿ. ತಮ್ಮನ
ನೋಲಗಿಸಿಕೊಂಡಿಹುದು. ರಾಜ್ಯವ
ಪಾಲಿಸೈ ಸುಗ್ರೀವ. ನನ್ನಿಂ ನೊಂದೆಯಿನ್ನೆಬರ.
ಆಳು ಸಾಮ್ರಾಜ್ಯವನು. ತಾರೆಯು
ಪೇಳುವಾನಯನೀತಿ ರಾಜ್ಯಕೆ
ಮೇಲನೊದವಿಪುವವನು ಮಿಾರಲ್ಬೇಡವೆಂದೆಂದುಂ.

೫೧

ಅಂಗದನೆ ಬಾರಿಲ್ಲಿ, ನಿನ್ನಯ
ಮಂಗಳಾಂಗದ ಸೋಂಕು ಮುಂದಕೆ
ಹಿಂಗುವುದು. ಬೇಗುದಿವ ಮೆಯ್ಯಿಗೆ ತಣ್ಪನೊಡರಿಸೆಲೈ.
ತುಂಗವಿಕ್ರಮಶಾಲಿ, ಚಿಕ್ಕಯ
ಸಂಗರಕ್ಷಣೆಮಾಡು. ತಂದೆಯ
ಸುಂಗಿದವನಿವನೆಂಬ ವೈರವ ನೆನೆಯಬೇಡೆಂದು.

೫೨

ಮಿತದಿ ನಡೆವವಗಹಿತರಿಲ್ಲವು.
ಮತವಿದಹುದೈ ನಯಯುತರ್ಕಳ.
ಹಿತವ ಪೇಳ್ದಳು ತಾರೆಯಾಕೆಯ ನುಡಿಯ ಮಾರಿದೆನು.
ಸುತನೆ, ಸುಗ್ರೀವನನು ತಾನೆನೆ
ಹಿತದಿ ನಂಬಿರು. ನಿನ್ನ ರಕ್ಷಣೆ
ಮತಿಯುತಳ ತಾರೆಯನು ಕೂಡಿಹುದಹಹ ಹಾ ನೋವು!

೫೩

ಮರಸಿ ಕೊರಳನು ಕೊಯ್ದ ಹಗೆಗಳ
ಕರದಲಿಕ್ಕುವೆಯೇಕೆ ತಂದೆಯೆ ?
ಸರಿವೆ ದೂರಕೆ ; ನಿನ್ನ ಹರಕೆಯು, ತಾರೆಯಾರೈಕೆ,
ಪಿರಿಯಜಾಂಬವನೊಲವು ಕೂಡಿರೆ
ಧರೆಯೊಳೇಕಚ್ಛತ್ರಪದವಿಯು
ದೊರೆಕಿಸನೆ ? ನಿನ್ನಣುಗ ದಾಸ್ಯಕೆ ಸೊಗಸುವನೆ ? ತಂದೆ,

೫೪

ಹೆತ್ತವರ ಹಿಗ್ಗಾದೆ ಕುಲದೊಳ
ಗತ್ಯಧಿಕಗುಣಶಾಲಿ. ಮಾತನು
ಕೃತ್ಯದಲಿ ತೋರಿಸುವ ಛಲಮಿಹುದಾದರುಂ ಬಾಲ
ಪತ್ತೆ ಕೋಪಾವೇಶ, ಕಪಿಗಳ
ಮೊತ್ತಮಿತ್ತೆರನಾಗಿ ನಿಲ್ಲ
ಲ್ಕೆತ್ತಣದು ಸುಖಶಾಂತಿ ? ರಾಜ್ಯಮೆ ನರಕಮುಂತಾಗೆ.

೫೫

ಪಗೆಯೆ ಮಿತ್ರನು ಮಿತ್ರನೇ ಪಗೆ,
ಜಗದ ಕೋಟಲೆಯುಂತು ಸಂಧಿಸೆ.
ಬಗೆಗೆ ಬೇಸರ ಬೇಡ. ಮಗುವೇ, ದಾಸ್ಯಮಿಲ್ಲಿಲ್ಲ.
ವಿಗಡ ತಮ್ಮನು ನಿನ್ನ ಬಾಲ್ಯದೆ
ಜಗವ ತಾಳ್ವನು. ನರರ ನೇಹದಿ
ಸೊಗದ ಸುಗ್ಗಿಯುಮುಂಟು. ಛಲಮುಂ ಪಿಡಿಯದಿರು ಕಂದ.

೫೬

ತಾರೆಯಿತ್ತಲ್ ಕೇಳ. ಸೊಗಮುಂ
ಸೂರೆಗೊಂಡೆವು. ತಣಿದೆವೆಂತುಂ
ಪಾರಿಪೋಗಲ್ಮನವು ಬಾರದು. ನಿಲ್ಲಲಳವಿಲ್ಲ.
ಸಾರುವೆನು ನಾನತ್ತ. ಕುವರನ
ನಾರಯಿದು ಭರಿಸುವುದು. ರಾಜ್ಯದ
ಭಾರ ಕಪಿಕುಲದೇಳ್ಗೆ ನಿನ್ನಯ ಮಂತ್ರದಲ್ಲಿಹುವು

೫೭

ಮನ್ನಿಪುದು ಪತಿದೇವ, ಶೂನ್ಯಮಿ
ದಿನ್ನು ಕಿಷ್ಕಿಂಧೆಯುಲಿ ನೆಲಸೆನು.
ಮನ್ನೆಯನ ನಿನ್ನಗಲುತೀಸಡಗಾಡಲಿರಲೊಲ್ಲೆ.
ಎನ್ನ ಪತಿಯೆಲ್ಲಿರ್ಪೆಯಲ್ಲಿಗೆ
ವಹ್ನಿಮುಖದಿಂ ಬಂದು ಸೇರುವೆ.
ಚೆನ್ನ ಮನ್ನಿಸು, ಕುವರರಕ್ಷಣೆಗಿರ್ಪರುಳಿದವರು.

೫೮

ಅಂತುಟಲ್ಲವು ಕಾಂತೆ, ಲೋಕದ
ಜಂತ್ರವಸು ಸುಳಿವರಿತು ನಡೆಯಿಪ
ಮಂತುಗಳ ಕಪಿಕುಲದೆ ಕಾಣೆನು. ಕಾಲಮಿನಿತೆಲ್ಲ
ಸೋಂತು ಕಟ್ಟಿದ ರಾಜ್ಯ ಪದಗೆ
ಟ್ಟೆಂತುಟುಂ ನೆಲೆಯಾಗಿ ನಿಲ್ಲದು.
ಶಾಂತನಾಗೆನು ಸತ್ತುಮುದರಿಂ ನಿಲ್ಸುದಾ ರಮಣಿ.

೫೯

ಬಾಳಿಗೊಂದೇ ಸಾವು, ನಮ್ಮೆಳು
ಬಾಳ ತೋಲಸಗೆಯ್ಯೆ ರಾಮನೆ,
ಬಾಳ ಕೋಟಿಯು ಸಾವು ಧರ್ಮಾಧರ್ಮಮುಂ ಬಲ್ಲ.
ಕಾಲಮಿಲ್ಲೈ ವಾದಕವರಾ
ತೋಲಸಮೆ ಸರಿಯಲ್ತೆ. ಜಾಂಬವ
ಬಾಳ ಕೊನೆಯುಲಿ ಸರಿದ ದೂರಕೆ ಕಾಣ್ಬೆನೆಂತವನ !

೬೦

ರಾಮ, ಮೋಸದಿ ಕೊಂದೆಯಿರಲದು.
ಭಾಮಿನಿಯು ಕಪಿಸಾಹ್ಯದಿಂ ಪಡೆ.
ಕೋಮಲೆಯ ಪಡೆಯಲ್ಕೆ ತಮ್ಮನು ಬಳಸಿ ನೀನಿಟ್ಟೆ.
ಕಾಮುಕನ ಪಡದಲೆಯಿನೆಳೆತರು
ತಾಮದಾಂಧನನೊರಸುತಿರ್ದೆನು.
ನೇಮವನು ವಿಧಿಯಿಂತು ಗೆಯ್ದನು. ನಿನಗುಮಂತಾಯ್ತು.

೬೧

ಅಗಲದಿರು ಸೀತೆಯನು. ಯುವಕರ
ಬಗೆಯ ಬಲ್ಲವ ನಾನು. ಧರ್ಮದ
ಬಗೆಯು ದೂರಾಗುವುದು ವಿರಹಿಗೆ. ಮೇರೆದಪ್ಪುವನು.
ತೆಗಳು ತಪ್ಪದು ಲೋಕದಲಿ· ಜನ
ರಗಲುವರು ದೂರಕ್ಕೆಯೆಂದೆನೆ,
ಬಗೆಗರಸಿ ಗುಳುಗುಳನೆ ಕಣ್ಣೀರ್ಗರೆದನಾರಾಮ.

೬೨

ಆದುದಾಯಿತು ವಾಲಿ. ಸಗ್ಗದ
ಮೇದಿನಿಯ ಸಾಮ್ರಾಜ್ಯ ನಿನ್ನನು
ಕಾಯ್ದು ಕುಳಿತಿಹುದಿಲ್ಲಿಯರಕೆಯನಲ್ಲಿ ಪೂರೈಸು.
ಆದರೇನೈ ರಾಮ. ತಾರೆಯ
ಮೋದವಂಗದನೊಲವನಲ್ಲಿಯ
ಸಾಧಿಸಲ್ದೊರಕುವುವೆ ಕಪಿಗಳ ಕೂಟವೇನೆಂಟ ?

೬೩

ತಮ್ಮ ಬಾ ಹತ್ತಿರಕೆ. ರಾಮನ
ನೆಮ್ಮ ನೇಹವ ಗಳಿಸು. ಕೊರಳೊಳ
ಗುಮ್ಮಹದಿಸಿದೊ ಧರಿಸು ಕಾಂಚನಮಾಲೆಯಿುದ ಮತ್ತಂ,
ಸೊಮ್ಮ, ಮಿಗಿಲಿನಹಮ್ಮನೆನ್ನಯ
ಸಮ್ಮದನ ನೀಯಂಗದನ ನೀ
ನೊಮ್ಮನದಿ ತಳೆ. ತೊಡವಿದೊಂದೇ ಕುಲಕೆ ಭೂಷಣವು.

೬೪

ಉಕ್ಕಿದುದು ಶೋಕಾಬ್ಧಿ. ತಮ್ಮನು
ಬಿಕ್ಕಿ ಬಿಕ್ಕಳಿಸುತ್ತೆ ಹುಡಿಯೊಳ
ಗಿಕ್ಕಿ ಮೆಯ್ಯನು ಹೊರಳಿ ಪಾದಕೆ ನೊಸಲ ಚಾಚಿದನು.
ಅಕ್ಕರೆಯ ಕುವರನನು ಕಯ್ಯೊಳ
ಗಿಕ್ಕಿ ಕಂಠಕೆ ಹಾರವೇರಿಸೆ
ದುಕ್ಕಮಿಮ್ಮಡಿಯಾಯ್ತು ಮೊಗವನು ಮುಚ್ಚಿ ನಾಣ್ಚಿದನು.

೬೫

ಸೋದರತ್ವವನಂತೆ ಧರ್ಮದ
ಹಾದಿಯನು, ಮೇಣಾರ್ಯಭಾವವ
ಸಾದರದಿ ಪರಿಪಾಲಿಸಿಪ್ಪೆ! ಅಣ್ಣ ನಾಂ ನಿನಗೆ
ಕ್ರೋಧವನು, ಮೇಣಂತೆ ಮಬ್ಬಿನ
ಹಾದಿಯನು, ಶಾಖಾಮೃಗತ್ವವ
ನೋ ದಯಾಂಬುಧಿ, ತೋರಿ ಕೆಟ್ಟೆನು ತಪ್ಪ ಮನ್ನಿಪುದು.

೬೬

ಎದೆಯು ನಚ್ಚಿನ ನುಡಿಯು ಪೊಕ್ಕುದು.
ಕದನಗಲಿಗಳ ಕಠಿನಹೃದಯಂ
ಮೃದುಲಮಾದುದು ಕರಗೆ ಬಗೆ ಕಣ್ಣೀರ ಸೂಸಿದರು.
ಬದಿಗೆ ಹಗೆಯುಸು ನೂಕಿ, ನೇಹದ
ಮುದಕೆ ಸಲ್ಗೆಯು ಕೊಟ್ಟರಿತ್ತಲ್
ತ್ರಿದಿವಪತಿಸುತ ಮುಚ್ಚೆವೋದನು ನೆಮ್ಮಿ ತಾರೆಯುನು.

೬೭

ಓಪಿ ವಿದ್ಯಾಬುದ್ಧಿಗಳನಂ
ದಾವನರಪಿದನವನ ಮನದೊಳ್
ನೋವದೇನೋ ಮೂಡಿ ಯೋಗಧ್ಯಾನನೆಲೆದಪ್ಪೆ,
ಆವನಾಂತವ ತೊರೆದು, ಕುವರ
ಗಾರ್ವ ಹದನೆಂದರಿಯೆ, ಜಾಂಬವ
ದೇವ ಬಂದನು. ಕರುಳ ಹೊಂದಿಕೆಗುಂಟು ಸಾಕ್ಷಿಗಳು.

೬೮

ಹಾದಿಕಾರರೆ ಕಿಚ್ಚು ಹೊಟ್ಟೆಗೆ
ಹೊಯ್ದು ಹೋದರು, ಯೋಗಪಲದಾ
ಮೋದಮಿಂತಾಯ್ತಡಗಿ ತಡಕಿದೆನೆಲ್ಲಿ ಶಾಂತಿಯುನು!
ಪೋದನವ ನೋವಿಂದಲುಳಿದೆಮ
ಗಾದುದಂತೆಯೆ ಬೇಗೆ, ಶಾಂತಿಯು
ಮೋದಮಿಲ್ಲಿರಲಿತ್ತು. ತೊಳಲಿದೆ, ಬರಿದೆ ಬೇಸತ್ತೆ.

೬೯

ಕೊಟ್ಟು ಕೊಂಡುಂಡುಟ್ಟು ಭಾಗ್ಯವ,
ಕುಟ್ಟಿ ತರಿದಿರಿದೊತ್ತು ತೆಡರನು,
ಸುಟ್ಟು ಕರಿಮುರಿಗೆಯ್ದು ಧರ್ಮವ, ಪೌರುಷಂದೋರಿ,
ಸಿಟ್ಟಿಯಿಂ ಸುರಿತಂಗೆ ಶಾಂತಿಯೊ?
ಸುಟ್ಟ ಕಾಡಂ ಸೇರ್ದು ಮಿಟಿಮಿಟಿ
ಗುಟ್ಟುವಗೆ ಮೇಣ್ ಶಾಂತಿ ದೊರೆವುದೊ? ಮೋಸಹೋದೆಸಲಾ!

೭೦

ದೂರಸರಿಯಲ್ ಕಪಿಕುಲಂಗಳು.
ಘೋರೆಸಲು ಮುಂದಡಿಯನಿಕ್ಕುತೆ,
ಘೋರದೃಶ್ಯವ ಕಂಡು ದೊಡ್ಡಯ ಕಡಿದ ಗಿಡದಂತೆ
ಘೂರಮೆಯ ಹುಡಿಯೊಳಗೆ ಹೊರಳುತ,
ತಾರರವದಿಂದೆಂದ ಕೆಟ್ಟಿನ
ಪಾರಸಾರದ ಗಣಿಯು ಕೊಚ್ಚಿತೆ! ಹುಡಿಗೆ ಸೇರಿದುದೆ!

೭೧

ತೊಡೆಯೊಳಗೆ ಬಳೆಯಿಸಿದ ಕಂದನ
ಹುಡಿಗೆ ಸೇರಿಸೆ ಬಂದೆನಕಟಾ
ಕುಡುಗಲಿಯೆ, ಮುದುಪಂಗೆ ನಿನ್ನಾಯುಷ್ಯ ಸೇರಿದುದೇ?
ಸುಡುವ ಜರೆಯಿಂ ನವೆದ ಮೆಯ್ಯಿಂ
ದೊಡರಿಸದೆ ಸಾವಿಹಗೆ? ಮಕ್ಕಳ
ಪಡೆದವಂಗೀ ನೋವು ಬೇಡ್ಕೈ ಜನ್ಮಜನ್ಮದೊಳು.

೭೨

ಒಡಕ ಮುಚ್ಚದೆ ಘಟವ ಕುಕ್ಕಿದೆ!
ದುಡುಕಿದೈ ಸುಗ್ರೀವ ಕೆಟ್ಟೈ !
ಪೊಡವಿಗಂ ಕಪಿಗಳ್ಗೆ ಸಿಸಗಂ ದಾಸ್ಯಮುಂ ತಂದೈ !
ಕಡುಗಲಿಯ ಕೈಸೂರೆಗೊಂಡೈ !
ಕಡುಗಿ ಕುಲಗೇಡಿಗನ ಬಾಳನು
ಪಡೆದೆಯೈ ! ಸಾಕಿದಸ ಬಾಳ್ಕೆಗೆ ಕೀರ್ತಿಯುಂ ತಂದೈ !

೭೩

ಅಂಗದನೆ ಸುಕುಮಾರ, ಪೆಗಲನು
ಪಿಂಗದೇರ್ಕೈ ತಂದೆ. ನೋವನು
ನುಂಗಿಸುವ ನೀನೋರ್ವನೇ ದಿಟ. ತೆಕ್ಕೆಯೊಳು ಬಾರ.
ಅಂಗನಾಮಣಿ ತಾರೆ, ವಿಧಿಗತಿ
ಗಂಗಲಾಚಿದೊಡೇನು? ನಿಲ್ವುದ
ಭಂಗಸತ್ತ್ವನ ಚರಮಸೇವೆಯ ಗೆಯ್ವ ನೀಂ ಬನ್ನಿ.

೭೪

ರಾಮನೆಂಬುವನಾರು ? ನೀನೇಂ ?
ಕಾಮಿತಾರ್ಥವ ಸಲಿಸಿ ಮಿತ್ರಗೆ
ಭೂಮಿಯೊಳ್ ಕೃತಕೃತ್ಯನಾದೈ ! ನಮ್ಮ ಕುಲದವರು
ನೇಮ ನಿಟ್ಟೆಯ ತಿಳಿಯರದರಿಂ
ದೀಮಹಕೆ ನೀಂ ಬಂದುದೊಳ್ಳಿತು !
ಹೇವದಿಂ ಮುಳುಗುತ್ತಲಿರ್ಪನು ತರಣಿ ಕುಲದೊಡೆಯ.

೭೫

ವಾಲಿ, ವಿಕ್ರಮಶಾಲಿ, ನಚ್ಚಿನ
ಬಾಲ, ನಿನ್ನನು ನೋಡ ಬಂದಿಹೆ
ನೇಳೆನುತೆ ಜಾಂಬವನು ತನ್ನಯ ಕರವ ಸೋಂಕಿಸಲು,
ಹಾಲುಸಕ್ಕರೆಯುಂಡತೆರದಿಂ
ತಾಳಿ ತೃಪ್ತಿಯ ಕಣ್ಣ ಬಿಟ್ಟನು.
ಭಾಳದಲಿ ಕರವಿಕ್ಕಿ ಶಾಂತಿಯ ನಗೆಯ ಸೂಸಿದನು.

೭೬

ತಂದೆ ತೀರ್ದುದು ಬಯಕೆ. ನೀನೈ
ತಂದೆ. ಕರದಿಂಸೋಂಕಿ ಶಾಂತಿಯ
ತಂದೆ. ವಾಲೀ, ಎಂದು ಕೂಗಿದೆ. ಸೊದೆಯ ಮಳೆಗರೆದ.
ಮಂದಿಮಕ್ಕಳ ನಡುವೆ ಶಾಂತಿಯ
ನೊಂದಿ ಪೊಂದುವೆ. ರಾಮ, ಬಾಣವ
ನೊಂದೆ ಮನದಿಂ ಕಿಳ್ತು ಶಾಂತಿಗೆ ದಾರಿದೋರಿಪೆಯ ?

೭೭

ಮೆಚ್ಚಿ ಶಲ್ಯವನಂತೆ ಕಪಟವ
ಚೆಚ್ಚರದೆ ಸೆಳೆದುಗಿಯೆ ರಾಮನು,
ಬೆಚ್ಚಿಬಿಳ್ದರು ಬುಗ್ಗರಕುತವ ಕಂಡು ಕಪಿವರರು.
ಮುಚ್ಚಿದರು ಸುರರೆಲ್ಲ ಪುಷ್ಪದಿ
ನಚ್ಚುಮೆಚ್ಚಿನ ಶಕ್ರಸುತನನು.
ಸಚ್ಚರಿತ ಬಾ ಬಾರೆಂದನು ರಾಜಭಲ್ಲೂಕ.

೭೮

ನಿಜದ ರಾಮನ ಕಂಡೆ. ರಾಮನ
ನಿಜವ ಮುಂದಕೆ ನೋಳ್ಪೆ. ರಘುಜನ
ಸುಜನತೆಯ ಸೋಂಕೀಗ ಲಭಿಸಿತು. ತೀರ್ದುವಾಸೆಗಳು.
ಬಿಜಯಗೆಯ್ವೆನು. ವಾನರರ್ಕಳ
ವಿಜಯವಲ್ಲಿಯು ಪರ್ಬಿಮಡಲಿಡ
ಲಜಮಹೇಶರಮೇಶರೊಲವಿಂದೊಂದು ಹಾರಿದನು.

೭೯

ಸುರಪತಿಯು ಗದ್ದುಗೆಯನೇರಿಸಿ,
ನೆರೆದು ಬೋಳೆಯರಮೃತಕಲಶದಿ
ವಿರಚಿಸಿದರಭಿಷೇಕವನು ದುಂದುಭಿಯು ಮೊೞಗಿಸಲಿ.
ಸುರಪನಂಶದಿನೊಗೆದ ವಾಲಿಯು
ಸುರಪತಿಯೊಳಂದೈಕ್ಯನಾದನು.
ಕರೆದರೆಲ್ಲರು ಪುಷ್ಪವೃಷ್ಟಿಯನುಬ್ಬಿ ಕೊಬ್ಬಿದರು.

೮೦

ತರಣಿ ನಾಣ್ಚುತಲಸ್ತಮಿಸಿದನು ;
ತರಣಿಸುತ ನಾಣ್ಚುತ್ತ ಕೊರಗಲು,
ತರಣಿವಂಶದ ರಾಮ ನಾಣ್ಚುತೆ ಕೊರಗುತನುತಪಿಸೆ,
ಹರಿಗಳೆಲ್ಲರು ದುಃಖವಾರಿಧಿ
ಗೆರೆದು ಕಣ್ಣೀರ್ಗಳನು ವರ್ಧಿಸೆ,
ಚರಮಸೇವೆಯ ಗೆಯ್ಯಲೆಲ್ಲರು ಪೊರಟರಲ್ಲಿಂದ.

೮೧

ಸುರಸನಂತಿರೆ ಸೊಗವನುಂಡನು.
ಹರಿಯುತೆರದಿಂದಿರಿದು ದೈತ್ಯರ,
ಚರಿಸಿದನು ವೇದೋಕ್ತಧರ್ಮವ ಜನಕನಂತಿವನು.
ಮೊರೆದ ರಘುಜರ ತೆರದೆ ಮುನಿಗಳ
ಕರೆಯುದೊಂದರ ಬಳಕೆಯಿಂದಿವ
ನುರಿದನಾಮಲ್ಲದ ಬಿಂದು ಕಿಡಿಸಿತು ಹಾಲ ಕಂಡುಗವ.

೮೨

ವಿಧಿಗೆ ಸಲ್ಗೆಯು ಜಯುಮನಿತ್ತರು.
ವಿಧಿವಿಹಿತಮಾರ್ಗದಲಿ ಕಪಿವರ
ಗುದಕವಿಧಿಗಳ ನೆಸಗಿ, ಜಾಂಬವಮುಖ್ಯರನುಮತಿಯಿಂ
ಪದೆದು ಸುಗ್ರೀವಂಗೆ ಪಟ್ಟದ
ವಿಧಿಯನೆಸಗಿದರಿಲ್ಲಿ ಕಪಿಗಳು.
ಪದುಮನೇತ್ರನ ಕರುಣೆಯಿಂ ಪೊಸವಾಳ್ಕೆ ಸಮನಿಸಿತು.

---

ಶಿವನ ಗೌರೀಧವನ
ಚರಣದೊಳಿದು
ಸುಮಾಂಜಲಿಯು.
ಓಂ ತತ್ಸತ್.



